ಬೆಂಗಳೂರುಸಿಟಿ
ಮಕ್ಕಳ ಪುಸ್ತಕ ಪ್ರೆಸ್ಸಿನಲ್ಲಿ
ಮುದ್ರಿಸಲ್ಪಟ್ಟಿತು.

೨೮೨

ಪ್ರಕಾಶಕರು :
ಕೃಷ್ಣಾ ಕಂಪೆನಿ,
ಬಳೇಪೇಟೆ, ಬೆಂಗಳೂರು ಸಿಟಿ.
೧೯೩೧.

# ಜಮದಗ್ನಿಯ ಆಶ್ರಮ.

---

ಆಶ್ರಮವಾಸಿಗಳು :—

ಇಂದು ಆಶ್ರಮದಲ್ಲಿ ಭಯೋತ್ಪಾತಗಳು ಕಾಣುತ್ತಿವೆ ಬಿರುಗಾಳಿ ಎದ್ದಿದೆ ಮರ ಗಿಡಗಳು ಮುರಿದುಬೀಳುತ್ತಿವೆ ಆಶ್ರಮದಲ್ಲಿ ಸಿಡಿಲಿನಂತಹ ಧನುಃಷ್ಟಂಕಾರಧ್ವನಿ ! ದುಂಬಿಗಳು ಪುಷ್ಪಲತೆಗಳಿಂದ ಉದುರಿ ಬೀಳುತ್ತಿವೆ. ಖುಷಿಗಳ ಚೀತ್ಕಾರ. ಮೃಗಗಳ ಆರ್ತನಾದ. ಆಶ್ರಮವೆಲ್ಲಾ ಅಲ್ಲಕಲ್ಲೋಲವಾಗಿದೆ. (ಭಯತ್ರಸ್ತರಾಗಿ ಸುತ್ತಲೂ ನೋಡುತ್ತಾ)

ಓ ಹೋ ! ಆಶ್ರಮ ಮೃಗಗಳನ್ನು ಬೇಟೆಯಾಡುತಾ ಭೀಷಣಾಕಾರನಾದ ಸಹಸ್ರ ಬಾಹು ಕಾರ್ತ್ಯವೀರ್ಯಾರ್ಜುನನು ಮದೋನ್ಮತ್ತನಾಗಿ ಇತ್ತ ಬರುತ್ತಿರುವನು. ಮಹಾಧನುರ್ಧಾರಿ ಇವನು. ಇವನನ್ನು ತಡೆಯುವುದೆಂತು ! ತಡೆಯಬಲ್ಲವರಾರು ? (ಕಾತರಸ್ವರದಿಂದ)

ತಪೋವನಕ್ಕೆ ಇಂದು ರಕ್ಷಕರಿಲ್ಲ. ಅನಾಥರಾಗಿದ್ದೇವೆ. ಈ ಆಶ್ರಮಕ್ಕೆ ಪ್ರಳಯವು ಸಂನ್ನಿಹಿತವಾಗಿದೆ ರಾಮಾ ! ರಾಮಾ !! ರಕ್ಷಿಸು ! ರಕ್ಷಿಸು !!

ಕಾರ್ತ್ಯವೀರ್ಯ :—

ತಪಸ್ವಿಗಳೇ ! ನಿಮಗೇನು ಭಯ ? ನಿಮ್ಮ ರಕ್ಷಕನಾರು ! ಆ ನಿಮ್ಮ ರಾಮನೆಲ್ಲಿಧಾನೆ !

ತಪಸ್ವಿಗಳು :—

ಮಹಾಪುರುಷನೇ ! ನೀನಾರು ? ನೀನೇ ನಮ್ಮ ಭಯಕಾರಣನು. ಈ ಆಶ್ರಮದಲ್ಲಿ ಇಷ್ಟು ನಿರ್ಭಯವಾಗಿ ಮೃಗಗಳನ್ನು ಕೊಲ್ಲುವೆ ನಿನ್ನ ಉಗ್ರಕರ್ಮದಿಂದ ಮಹರ್ಷಿಗಳ ತಪೋಭಂಗವಾಗಿದೆ.

ರಾಜಾನುಚರರು :—

ಭುಜಬಲ ಪರಾಕ್ರಮದಿಂದ ಮೂರುಲೋಕಗಳನ್ನು ಜಯಿಸಿರುವ ಕಾರ್ತ್ಯವೀರ್ಯಾರ್ಜುನನ ಹೆಸರು ಕೇಳಿಲ್ಲವೊ ನೀವು ?

ತಪಸ್ವಿಗಳು :—

ಮಹಾರಾಜನೇ ! ಶಾಂತನಾಗು ! ಧನುಸ್ಸಿನ ಹೆದೆಯನ್ನಿಳಿಸು. ಕ್ಷತ್ರಿಯೋತ್ತಮನಾದ ನೀನು ಆಶ್ರಮವಾಸಿಗಳನ್ನು ಹಿಂಸಿಸಬಹುದೇ ?

ಕಾರ್ತವೀರ್ಯ :—

ಈ ಮೃಗಯಾವಿಹಾರವು ನನ್ನ ಆನಂದಕ್ಕಾಗಿ ! ಇದು ಕ್ಷತ್ರಿಯರಿಗೆ ಸಹಜ ! ಅದರಿಂದ ನಿಮಗೇನು ಹಿಂಸೆ ?

ತಪಸ್ವಿಗಳು :—

ಆಶ್ರಮದ ಸಾಧುಮೃಗಗಳನ್ನು ಹಿಂಸಿಸಲು ಯಾರಿಗೂ ಅಧಿಕಾರವಿಲ್ಲ !

ಕಾರ್ತವೀರ್ಯ :—

ಅಧಿಕಾರ ಅನಧಿಕಾರದ ಮಾತು ನಿಮಗೇಕೆ ? ನಾನು ಸರ್ವತಂತ್ರ ಸ್ವತಂತ್ರ. ಇದು ನನ್ನರಾಜ್ಯ. ಇಲ್ಲಿ ನನ್ನ ಮನಸ್ಸಿನಂತೆ ಮಾಡಬಲ್ಲೆ ! ನನ್ನ ಇಷ್ಟ !

ತಪಸ್ವಿಗಳು :—

ಇಲ್ಲಿ ಮನಬಂದಂತೆ ಸ್ವೇಚ್ಛಾವಿಹಾರಮಾಡಿದರೆ ಮಹರ್ಷಿಗಳ ಆಗ್ರಹಕ್ಕೆ ಪಾತ್ರನಾಗುವೆ!

ಕಾರ್ತವೀರ್ಯ :—

ಈ ಆಶ್ರಮದಲ್ಲಿ ತಪಸ್ಸುಮಾಡುತ್ತಿರುವ ಮಹರ್ಷಿ ಯಾರು?

ತಪಸ್ವಿಗಳು :—

ಈ ಆಶ್ರಮವು ಜಮದಗ್ನಿಮಹರ್ಷಿಯದು. ಆ ಮಹರ್ಷಿಯ ತಪಸ್ಸಾಮ್ರಾಜ್ಯವು ಇಲ್ಲಿ ಬೆಳಗುತ್ತಿದೆ.

ಕಾರ್ತವೀರ್ಯ :—

ಓ ಹೋ! ಕೇಳಬಲ್ಲೆ! ಆ ಮಹರ್ಷಿಯ ಬಳಿಯಲ್ಲಿ ಸ್ವರ್ಣ ಧೇನು ಇರುವುದೆಂದು ಕೇಳಿದ್ದೇನೆ. ಆ ಸಂಪತ್ತು ದೇವೇಂದ್ರನಿಗೂ ಇಲ್ಲವೆಂದು ಹೇಳುತ್ತಾರೆ. ಆದರಿಂದಲೆ ಈ ವನವು ಇಷ್ಟು ಮನೋಹರವಾಗಿದೆ. ಬ್ರಾಹ್ಮಣರೇ! ಆ ಮಹರ್ಷಿಯು ಈಗ ಆಶ್ರಮದಲ್ಲಿ ರುವನೋ?

ತಪಸ್ವಿಗಳು :—

ಇದೋ ಇತ್ತಕಡೆಯೇ ಬರುತ್ತಿರುವನು.

[ಜಮದಗ್ನಿಮಹರ್ಷಿಯು ಆಶ್ರಮದಕಡೆಯಿಂದ ಬರುವನು. ಸ್ವರ್ಣಧೇನುವು ಹಿಂಬಾಲಿಸಿ ಬರುವುದು.]

ಕಾರ್ತವೀರ್ಯ :—

ಮಹರ್ಷಿಯೇ! ಸಕಲಲೋಕಗಳ ಕರ್ತಾಕರ್ತನಾದ ಕಾರ್ತ್ಯ ವೀರ್ಯಾರ್ಜುನನು ಅಭಿವಂದಿಸುವನು.

ಜಮದಗ್ನಿ :—

ಶ್ರೇಯೋಸ್ತು ! ವಿಜಯೀಭವ !!

ಮಹಾರಾಜನೇ ! ಆಶ್ರಮಕ್ಕೆ ದಯಮಾಡಿಸು. ನಮ್ಮ ಸ್ವರ್ಣ ಧೇನುವಿನ ಆತಿಥ್ಯವನ್ನು ಸ್ವೀಕರಿಸು ! ನಿನ್ನ ಮೃಗಯಾವಿಹಾರವನ್ನು ನಿಲ್ಲಿಸು ! ಸಾಧುಮೃಗಗಳು ಬಾಣಪ್ರಘಾತದಿಂದ ಆರ್ತನಾದ ಮಾಡುತ್ತಿವೆ. ಹಿಂಸೆಯಿಂದ ಆಶ್ರಮವು ಅಪವಿತ್ರವಾಗುತ್ತದೆ.

ಕಾರ್ತ್ಯವೀರ್ಯ :—

ಮಹರ್ಷಿಯೇ ! ಮೃಗಯಾವಿಹಾರವು ನನ್ನ ಆನಂದ. ಈ ಮನೋಹರವಾದ ವನದಲ್ಲಿ ಬೇಟೆಯಾಡುವುದಕ್ಕಿಂತ ಬೇರೊಂದು ಆತಿಥ್ಯವು ನನಗೆ ಬೇಕಾಗಿಲ್ಲ !

ಜಮದಗ್ನಿ :—

ರಾಜನೇ ! ಈ ಆಶ್ರಮದಲ್ಲಿ ಬೇಟೆಯಾಡಕೂಡದು

ಕಾರ್ತ್ಯವೀರ್ಯ :—

ಮಹರ್ಷಿಯೇ ! ಈ ಲೋಕವೆಲ್ಲವೂ ನನ್ನದು. ನನ್ನ ಅಧಿಕಾರವು ಅಪ್ರತಿಹತವಾದುದು.

ಜಮದಗ್ನಿ :—

ಹೌದು ! ಈ ಲೋಕದ ರಕ್ಷಣೆಯ ಅಧಿಕಾರವು ನಿನ್ನಲ್ಲಿ ಇಡಲ್ಪಟ್ಟಿದೆ. ನಿನ್ನ ಕೈಯ್ಯಲ್ಲಿ ಶಸ್ತ್ರವಿರುವುದು ಆರ್ತರಕ್ಷಣೆಗಾಗಿ ! ಸಾಧುಪ್ರಾಣಿಗಳನ್ನು ಹಿಂಸಿಸುವುದಕ್ಕಲ್ಲ !!

ಕಾರ್ತ್ಯವೀರ್ಯ :—

ಮಹರ್ಷಿಯೇ ನನ್ನ ಕೈಯಲ್ಲಿರುವ ಶಸ್ತ್ರದ ಶಕ್ತಿಯನ್ನು ನಾನು ಬಲ್ಲೆ ! ಅದರ ಸಾರ್ಥಕ್ಯವನ್ನು ಬಲ್ಲೆ !! ನನ್ನ ಸುಖಕ್ಕಾಗಿ,

ಲೋಕ ವಿಜಯಕ್ಕಾಗಿ, ನಾನು ಧನುಸ್ಸನ್ನು ಧರಿಸಿದ್ದೇನೆ ನನ್ನ ಮನಬಂದಂತೆ ಪ್ರಪಂಚವನ್ನು ಬಗ್ಗಿಸುವುದಕ್ಕಾಗಿ ನಾನು ಶಸ್ತ್ರವನ್ನು ಪ್ರೀತಿಸುತ್ತೇನೆ. ಈ ಲೋಕವೆಲ್ಲವೂ ನನ್ನ ಸುಖಕ್ಕಾಗಿಯೇ ಇದೆ. ನನ್ನ ಸುಖಕ್ಕಾಗಿ, ನನ್ನ ಆನಂದಕ್ಕಾಗಿ, ಈ ಚತುರ್ದಶ ಭುವನಗಳನ್ನು ನನ್ನ ಭುಜಬಲದಿಂದ ಜಯಿಸಿದ್ದೇನೆ.

ಜಮದಗ್ನಿ :—

ಚಕ್ರವರ್ತಿಯೇ ! ನಿನ್ನನ್ನು ಪ್ರಾರ್ಥನೆ ಮಾಡುತ್ತೇನೆ. ಆಶ್ರಮವಾಸಿಗಳನ್ನು ಹಿಂಸಿಸಬೇಡ ! ಆಶ್ರಮ ಧರ್ಮಕ್ಕೆ ಭಂಗವನ್ನುಂಟುಮಾಡಬೇಡ ! ತಪಸ್ಸಿಗೆ ವಿಘ್ನವನ್ನಾಚರಿಸಬೇಡ !

ಕಾರ್ತ್ಯವೀರ್ಯ :—

ಈ ಆಶ್ರಮವು ನನ್ನ ವಿಹಾರಕ್ಕೆ. ನೀನು ಅಡ್ಡಿಯಾಗಕೂಡದು ಇದು ರಾಜೇಚ್ಛೆ !

ಜಮದಗ್ನಿ :—

ರಾಜನೇ ! ಸುಖಿಯಾಗಿರು. ಈ ತಪೋವನವನ್ನು ನಿನ್ನ ವಿಹಾರ ಸ್ಥಾನವಾಗಿ ಬಯಸುವುದಾದರೆ, ನಾವು ಈ ಆಶ್ರಮವನ್ನು ಬಿಟ್ಟು, ಬೇರೊಂದು ವನಪ್ರದೇಶಕ್ಕೆ ತೆರಳುವೆವು.

ಕಾರ್ತ್ಯವೀರ್ಯ :—

ತಪಸ್ವಿಗಳೇ ! ನೀವು ಎಲ್ಲಿಗೆ ಬೇಕಾದರೂ ಹೋಗಬಹುದು. ಮೂರುಲೋಕಗಳಿಗೂ ನಾನೇ ರಾಜ! ಎಲ್ಲಿ ಹೋದರೂ ನನ್ನ ಅಧಿಕಾರವು ನಿಮ್ಮ ಮೇಲೆ ಇದ್ದೇ ಇದೆ.

ತಪಸ್ವಿಗಳು:—

ಆಹಾ ತಪಸ್ವಿಗಳ ಮೇಲೆ ನಿನ್ನ ಅಧಿಕಾರವೇ ? ನಾವು ನಿಮ್ಮ ಬಂದಿಗಳೇ ?

ಕಾರ್ತ್ಯವೀರ್ಯ :—

ನಾನು ನಿಮ್ಮ ರಾಜ! ಚರಾಚರಭುವನಗಳಿಗೆ ನಾನೇ ಶಾಸನ ಕರ್ತನು!

ತಪಸ್ವಿಗಳು : —

ಚರಾಚರ ಭುವನಗಳಿಗೆ ಮಾತ್ರವೇ ಏಕೆ? ಚರಾಚರಗಳ ಒಡೆಯನಾದ ಜಗದೀಶನಿಗೂ ಪರಮೇಶನಾಗು! ಸುಖದಿಂದ ಬಾಳು

( ಆಶ್ರಮದ ಕಡೆಗೆ ಹಿಂದಿರುಗುವರು )

ಕಾರ್ತ್ಯವೀರ್ಯ :—

ಮಹರ್ಷಿಯೇ! ನಿಲ್ಲು ನಿಲ್ಲು ರಾಜಯೋಗ್ಯವಾದ ಒಂದು ವಸ್ತುವನ್ನು ನಿಮ್ಮಿಂದ ಕಾಣಿಕೆಯಾಗಿ ತೆಗೆದುಕೊಂಡು ಹೋಗಲು ಬಯಸುವೆನು.

ಜಮದಗ್ನಿ :—

ವನವಾಸಿಗಳಾದ ನಮ್ಮಲ್ಲಿ ರಾಜಯೋಗ್ಯ ವಸ್ತುಗಳು ಎಲ್ಲಿಂದ ಬರಬೇಕು? ನಾವು ರಾಜರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುವ ಅಧೀನರಲ್ಲ! ತಪೋಧನರು ಸರ್ವತಂತ್ರ ಸ್ವತಂತ್ರರು.

ಕಾರ್ತ್ಯವೀರ್ಯ :—

ಅದು ನಿಮ್ಮ ಮಾತು. ನೀವು ನನ್ನ ಪ್ರಜೆಗಳು. ನನ್ನ ಬಂದಿಗಳು. ಪ್ರಜೆಗಳಲ್ಲಿರುವ ಸಕಲಸಂಪತ್ತು ರಾಜರ ಸುಖ ವೈಭವಗಳಿಗಾಗಿಯೇ! ನಾನು ಬಯಸುವ ವಸ್ತುವನ್ನು ನನಗೊಪ್ಪಿಸದಿದ್ದರೆ ಅದು ಮಹತ್ತರವಾದ ರಾಜದ್ರೋಹ! ಆಗ ಬಲಾತ್ಕಾರದಿಂದ ತೆಗೆದುಕೊಳ್ಳುವೆವು. ಈ ಲೋಕವೆಲ್ಲವೂ ನಮ್ಮ ಭುಜಬಲಕ್ಕೆ ಬಗ್ಗಿದೆ.

ಜಮದಗ್ನಿ :—

ಭೂಮಿಯನ್ನು ಬಗ್ಗಿಸಬಹುದು. ಭೂಸುರರು ಬಗ್ಗುವವರಲ್ಲ.

ಕಾರ್ತ್ಯವೀರ್ಯ :—

ವೃದ್ಧಮುನಿಯೇ! ವಾದದಿಂದೇನು? ಇಗೋ! ಛಲದಿಂದ ಈ ಸ್ವರ್ಣಧೇನುವನ್ನು ನಾನು ತೆಗೆದುಕೊಂಡಿಧೇನೆ. ಇದೇ ನನಗೆ ಕಾಣಿಕೆ!

ಜಮದಗ್ನಿ :—

ಓ ಹೋ! ರಾಜನೇ! ಸ್ವರ್ಣಧೇನುವನ್ನು ಬಯಸಿ ಬಂದಿರುವೆಯಾ? ಅದು ಮದೋನ್ಮತ್ತರ ಭೋಗ್ಯವಸ್ತುವಲ್ಲ! ತಪೋಧನರ ತಪಸ್ಸಾಧನವದು.

ಕಾರ್ತ್ಯವೀರ್ಯ :—

ಈ ಪ್ರಪಂಚವೆಲ್ಲವನ್ನೂ ಭೋಗಸಾಮ್ರಾಜ್ಯವಾಗಿ ಮಾಡಿಕೊಳ್ಳುವ ಸಾಮರ್ಥ್ಯವು ನನಗಿದೆ ಈ ಸ್ವರ್ಣಧೇನುವು ತಪಸ್ಸಾಧನವಾಗಿರಲೀ, ಭೋಗಸಾಧನವಾಗಲೀ, ಅದು ನನಗೆ ಬೇಕು. ಅದು ನನ್ನದು. ನೀನು ಅದನ್ನು ರಕ್ಷಿಸಿಕೊಳ್ಳಲಾರೆ!

ಜಮದಗ್ನಿ:—

ನಾನೇಕೆ ರಕ್ಷಿಸಬೇಕು? ಸ್ವರ್ಣಧೇನುವನ್ನು ಬ್ರಹ್ಮಾಸ್ತ್ರವು ಕಾಯುತ್ತಿದೆ. ರಾಜನೇ! ಮದೋನ್ಮತ್ತನಾಗಿ ಧೇನುವನ್ನು ಸ್ಪರ್ಶ ಮಾಡೀಯೆ! ಜೋಕೆ!!

[ರಾಜಭಟರು ಧೇನುವನ್ನು ಹಿಡಿದೆಳೆಯುವರು. ಧೇನುವು "ಹುಂ" ಕರಿಸುವುದು ಅಗ್ನಿಜ್ವಾಲೆಯೆದ್ದು ಭಟರು ಸತ್ತು ಬೀಳುವರು]

[ಕಾರ್ತ್ಯವೀರ್ಯನು ಕೋಪಾವಿಷ್ಟನಾಗಿ ಸ್ವರ್ಣಧೇನುವನ್ನು ತಾನೇ ಹಿಡಿದೆಳೆಯಲು ಹೋಗುವನು]

ಆಕಾಶವಾಣಿ :—

ಧೇನುವನ್ನು ಮುಟ್ಟಬೇಡ! ಆ ಧೇನುವನ್ನು ಬಲಾತ್ಕರಿಸಿದರೆ ಬ್ರಹ್ಮಾಸ್ತ್ರವು ರಕ್ಷಿಸುವಂತೆ ಬ್ರಹ್ಮದೇವನ ವರವಿರುವುದು. ಎಚ್ಚರಿಕೆ!

ಕಾರ್ತ್ಯವೀರ್ಯ :—

ಇದೆಲ್ಲಾ ಬ್ರಾಹ್ಮಣರ ಮಾಯೆ! ಸಾಕ್ಷಾತ್ ಬ್ರಹ್ಮದೇವನೇ ಚತುರ್ದಶಭುವನಗಳಲ್ಲಿ ನನ್ನ ಪರಾಕ್ರಮಕ್ಕೆ ಎದುರಿಲ್ಲವೆಂದು ಅಭಯವಿತ್ತಿರುವನು. ಇರಲಿ! ಇರಲಿ!! ನಾನು ಈ ಸ್ವರ್ಣಧೇನುವನ್ನು ತೆಗೆದುಕೊಂಡೇ ಹೋಗುವೆನು.

[ಎಂದು ಧೇನುವನ್ನು ಹಿಡಿದುಕೊಳ್ಳಲು ಉಜ್ಜುಗಿಸುವನು]

ಧೇನುವು 'ಹೂಂ'ಕರಿಸುತ್ತಾ ಅಗ್ನಿಜ್ವಾಲೆಯನ್ನು ಕಾರುತ್ತಾ ಅಂತರಿಕ್ಷದಲ್ಲಿ ಹಾರಿಹೋಗುವುದು.

ಕಾರ್ತ್ಯವೀರ್ಯನು ಧೇನುವಿನಮೇಲೆ ಬಾಣಪ್ರಯೋಗಮಾಡುವನು.

ಅಂತರಿಕ್ಷದಲ್ಲಿ ಬ್ರಹ್ಮಾಸ್ತ್ರವು ಜಾಜ್ವಲ್ಯಮಾನವಾಗಿ ಚಕ್ರಾಕಾರವಾಗಿ ತಿರುಗಲಾರಂಭಿಸುವುದು. ಅದರಿಂದ ಸಹಸ್ರ ಸಹಸ್ರ ಸಿಡಿಲುಗಳು ಏಕಕಾಲದಲ್ಲಿ ಎದ್ದಂತೆ ಭಯಂಕರಧ್ವನಿ ಪ್ರಳಯಾಗ್ನಿಯಂತಹ ಅಗ್ನಿಜ್ವಾಲೆಗಳು ಭೂವ್ಯೋಮಾಕಾಶಗಳನ್ನು ಆವರಿಸುವುವು. ಕಾರ್ತ್ಯವೀರ್ಯನು ದಿಗ್ಭ್ರಾಂತನಾಗಿ ತಲೆಯೆತ್ತಿ ನೋಡುವನು.

ಕಾರ್ತ್ಯವೀರ್ಯ :—

ಆಹಾ ! ವಿಷ್ಣುವಿನ ಸುದರ್ಶನಚಕ್ರವನ್ನು ನೋಡಿದ್ದೇನೆ. ಇಂದ್ರನ ವಜ್ರವನ್ನು ಮುರಿದಿದ್ದೇನೆ. ಕಾಲಭೈರವನ ತ್ರಿಶೂಲವನ್ನು ಎದುರಿಸಿದ್ದೇನೆ ಇಲ್ಲ ಈ ಧ್ವನಿ, ಈ ತೇಜಸ್ಸು, ಈ ಜ್ವಾಲಮಾಲೆಗಳು ಎಲ್ಲಿಯೂ ಇಲ್ಲ ! ಅಗೋ ! ಆ ತೇಜೋಮಂಡಲದಲ್ಲಿ ಸ್ವರ್ಣಧೇನುವು ಭೈರವರೂಪದಿಂದ ವಿರಾಜಿಸುತ್ತಿದೆ. ಸಕಲಲೋಕಗಳನ್ನೂ ಕಬಳಿಸುತ್ತಿರುವ ಈ ಘೋರರೂಪ ! ಜ್ವಾಲಮಾಲೆಗಳ ಗಂಭೀರ ಗುಹೆಯಂತಿರುವ ವಿಸ್ತೃತವದನ. ನರಲೋಕವೀರರೆಲ್ಲರೂ ಆ ವದನದಲ್ಲಿ ಹೋಗಿ ಬೀಳುತ್ತಿದ್ದಾರೆ. ಅಲ್ಲಿ ಚಾಚಿದ ನಾಲಿಗೆಯಿಂದ ಸೋರುತ್ತಿರುವ ಕ್ಷತ್ರಿಯರ ಬಿಸಿರಕ್ತದ ನೊರೆಯ ಬುಗ್ಗೆಗಳು. ಕೋರದಾಡೆಗಳಲ್ಲಿ ರಾಜಾಧಿರಾಜರ ಛಿನ್ನ ವಿಚ್ಛಿನ್ನ ಮಸ್ತಕಗಳು. ಕೊರಳಲ್ಲಿ ಹೈಹಯವೀರಪುತ್ರರ ರುಂಡಮಾಲೆಗಳು. ಆ ಮಾಲೆಯಲ್ಲಿ ನಾಯಕಮಣಿಯಂತೆ ಜ್ವಲಿಸುತ್ತಿರುವ ನನ್ನ (ಕಾರ್ತ್ಯವೀರ್ಯನ) ಸ್ವಂತ ಶಿರಸ್ಸು.

(ಈ ಉಗ್ರರೂಪವನ್ನು ನೋಡಲಾರದೇ ಕಣ್ಣುಮುಚ್ಚಿಕೊಂಡು ತೊದಲುನುಡಿಯಲ್ಲಿ)

ಸ್ವರ್ಣಧೇನುವಲ್ಲ ಇದು ಬ್ರಹ್ಮಾಸ್ತ್ರ! ಈ ರೂಪು ಪ್ರಳಯಕಾಲದ ವಿಶ್ವರೂಪು!

(ಮನಸ್ಸಿನ ವೀಣೆಯಲ್ಲಿ ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ)

---

# ವಿಷ್ಕಂಭ

---

ಗಾಲವ:—

ಅಪ್ಪಪ್ಪಾ ! ಈದಿನ ನಮ್ಮ ಆಶ್ರಮದಲ್ಲಿ ಏನು ಅನಾಹುತ ! ಎಷ್ಟು ಅದ್ಭುತ !

ವಾಲಖಿಲ್ಯ:—

ಮಲ್ಲಿಗೆಯ ವನದಲ್ಲಿ ಸಿಡಿಲು ಬಡಿದ ಹಾಗಾಯಿತು. ಸಿಡಿಲೆಂದರೆ ಸಾಧಾರಣ ಸಿಡಿಲಲ್ಲ ಪ್ರಳಯ ಕಾಲದ ಸಿಡಿಲು

ಗಾಲವ:—

ಆ ರಾಜನು ಎಷ್ಟು ಪರಾಕ್ರಮಶಾಲಿ! ಎಷ್ಟು ತೇಜಸ್ವಿ! ಎಂಥಾ ಬಲಶಾಲಿ! ಆತನನ್ನು ಚಕ್ರವರ್ತಿ ಎಂದರೆ ಎಲ್ಲರೂ ಒಪ್ಪುವಹಾಗಿದೆ.

ವಾಲಖಿಲ್ಯ:—

ಆ ರಾಜನು ಎಷ್ಟು ದುಷ್ಟ ! ನಮ್ಮ ಮಹರ್ಷಿಯೆಂದರೆ ಎಲ್ಲರಿಗೂ ಗೌರವ. ಎಲ್ಲರಿಗೂ ಭಕ್ತಿ, ದೇವೇಂದ್ರನು ಈ ಆಶ್ರಮಕ್ಕೆ ಬಂದರೂ, ಧನುಸ್ಸನ್ನು ಮಾತಲಿಯ ಕೈಲಿಕೊಟ್ಟು ವಿನೀತಭಾವದಿಂದ ಬರುವನು.

ಗಾಲವ:—

ಧೇನುವನ್ನು ಹಿಡಿದು ಎಳದಾಗ ಮಹರ್ಷಿಯು ಶಾಪಕೊಟ್ಟೇ ಬಿಡುತ್ತಾನೆಂದು ಇದ್ದೆ. ಏನೋ ಚಕ್ರವರ್ತಿ ಬದಕಿಕೊಂಡ ಜೀವದಿಂದ ಉಳಿದು ಪೂರಿಗ ಹೋದ.

ವಾಲಖಿಲ್ಯ:—

ನೀನು ಮುಗಿದು ಹೋಯಿತೆಂದುಕೊಳ್ಳಬೇಡ. ರಾಮನು ಆಶ್ರಮಕ್ಕೆ ಬರುತ್ತಲೇ ಇಲ್ಲಿ ನಡೆದ ಸಮಾಚಾರವನ್ನು ಕೇಳುತ್ತಲೇ, ಏನಾಗುವುದೋ? ಏನೋ ವಿಪರೀತಕ್ಕಿಟ್ಟುಕೊಂಡಿತು.

ಗಾಲವ:—

ಆ ರಾಜನಿಗೆ ಬಹಳ ಸೇನಾ ಬಲವಿದೆಯಂತೆ ನಮ್ಮ ರಾಮನಿಗೆ ಯಾರಿದ್ದಾರೆ? ನಾವೆಲ್ಲಾ ಯುದ್ಧವೆಂದರೆ ಓಡಿಹೋಗುವ ಪಲಾಯನ ಶೂರರು !

ವಾಲಖಿಲ್ಯ:—

ಇದು ಕಾರ್ತ್ಯವೀರ್ಯ ರಾಮರ ಯುದ್ಧದಲ್ಲಿಯೇ ನಿಲ್ಲುವುದಿಲ್ಲ. ಇವರಿಂದ ಬ್ರಾಹ್ಮಣ ಕ್ಷತ್ರಿಯರ ಮಹಾಯುದ್ಧವಾಗುವುದು. ಮಹರ್ಷಿಯು ನಮಗೂ ಶಸ್ತ್ರವಿದ್ಯೆಯನ್ನು ಉಪದೇಶ ಮಾಡಿದ್ದರೆ ಎಷ್ಟೋ ಚೆನ್ನಾಗಿತ್ತು.

ಗಾಲವ:—

ಯುದ್ಧವಾದರೆ ನೀನು ಯುದ್ಧಮಾಡುವೆಯಾ ? ರಾಜರೊಡನೆ ನಮಗ್ಯಾಕಪ್ಪಾ ಯುದ್ಧ ? ಯಾವ ರಾಜ್ಯ ಗೆಲ್ಲಬೇಕಾಗಿದೆ ನಾವು ? ಇದೆಲ್ಲಿ ಬಂತು ರಾಜಸವೃತ್ತಿ ನಿನಗೆ? ಕೇಳಿಲ್ಲವೇ ದೊಡ್ಡವರು ಹೇಳು ವುದು?

"ಬ್ರಾಹ್ಮಣಸ್ಯ ಧನಂ ತಪಃ"

ವಾಲಖಿಲ್ಯ :—

ಹೌದು ! ಹೌದು ! ತಪಸ್ಸಿಗೆ ತಪಸ್ಸು ! ಯುದ್ಧಕ್ಕೆ ಯುದ್ಧ!
ಇದಂಬ್ರಾಹ್ಮ ಮಿದಂಕ್ಷಾತ್ರಂ ಶಾಪಾದಪಿ ಶರಾದಪಿ !
ಇದೇ ಇಂದಿನ ಸಮಸ್ಯೆ !

# ದ್ವಿತೀಯದೃಶ್ಯ.

---

ಪರಶುರಾಮನು ತಪೋವನವನ್ನು ಪ್ರವೇಶಿಸುತ್ತಾ:—

ರಾಮ :—

ಇಂದಿನ ಪ್ರಭಾತವು ರಮಣೀಯವಾಗಿಲ್ಲ. ಏನೋ ಮನಸ್ಸಿನಲ್ಲಿ ಕಳವಳ! ಏಕೆ? ತಪೋವನದಲ್ಲಿ ಏನಾದರೂ ಉತ್ಪಾತವು ಸಂಭವಿಸಿರಬಹುದೇ?

ಪ್ರವೇಶಿಸಿ :—

ಆಹಾ! ವೃಕ್ಷಗಳು ಮುರಿದುಬಿದ್ದಿವೆ. ಲತೆಗಳು ಹರಿದು ಛಿನ್ನವಿಚ್ಛಿನ್ನವಾಗಿವೆ. ಇದೇಕೆ? ಆಶ್ರಮ ಮೃಗಗಳು ಕಾತರವಾಗಿವೆ. ಮೃಗಪೋತಗಳ ಚೀತ್ಕಾರಧ್ವನಿ! ಗೋವುಗಳು ಕಂಬನಿಗರೆಯುತ್ತಿವೆ! ಏಕೆ?

(ಮುಂದೆಬಂದು)

ಶಿವ! ಶಿವ!! ಸಾಧುಮೃಗಗಳು ಸತ್ತುಬಿದ್ದಿವೆ. ವನಪ್ರದೇಶವೆಲ್ಲಾ ರಕ್ತಮಯ! ಈ ದಿವ್ಯವಾದ ತಪೋವನವು ಸ್ಮಶಾನದಂತಾಗಿದೆ.

ವಟುಗಳು ಪ್ರವೇಶಿಸುವರು :—

ರಾಮನೇ! ನಮಸ್ಕರಿಸುವೆವು.

ರಾಮ :—

ಬ್ರಹ್ಮಚಾರಿಗಳಿರಾ! ನಿಮ್ಮ ಮುಖಗಳು ಏಕೆ ಇಷ್ಟು ತೇಜೋಹೀನವಾಗಿವೆ? ನೀವೇಕೆ ಇಷ್ಟು ಭಯವಿಹ್ವಲರಾಗಿದ್ದೀರಿ?

ಈ ತಪೋವನದಲ್ಲಿ ಇಷ್ಟೊಂದು ಹಿಂಸೆಗೆ ಕಾರಣರಾರು ? ಈ ರಮ್ಯ ವನದ ಶಾಂತತೆಯನ್ನು ಭಂಗಪಡಿಸಿದವರಾರು ? ತಪೋವನದಲ್ಲಿ ರಕ್ತಪಾತ ! ಬ್ರಹ್ಮಚಾರಿಗಳಿಗೆ ಭಯೋತ್ಪಾತ! ಸಾಧುಮೃಗಗಳ ಸಾವು ತಪಸ್ವಿಗಳ ನೋವು! ಇದೆಲ್ಲಾ ಯಾರಿಂದ ಸಂಭವಿಸಿತು? ತಾತನ ಈ ತಪಸ್ಸಾಮ್ರಾಜ್ಯದಲ್ಲಿ ಇಂತಹ ಅತ್ಯಾಚಾರವನ್ನು ಮಾಡುವ ಸಾಹಸವು ಈ ಲೋಕದಲ್ಲಿ ಯಾರಿಗುಂಟು? ಪಾತಾಳದಿಂದ ರಾಕ್ಷಸರು ಎದ್ದು ಬಂದು ಈ ಘೋರಕೃತ್ಯವನ್ನು ಮಾಡಿ, ಓಡಿಹೋಗಿ ಔತು ಕೊಂಡಿರಬಹುದೇ? ಈ ಭೂಮಿಯನ್ನು ಶೀಳಿ ಪಾತಾಳಲೋಕವನ್ನೇ ಸುಟ್ಟುಬಿಡುವೆನು; ಆ ಜ್ವಾಲೆಯಲ್ಲಿ ರಾಕ್ಷಸಕುಲವೇ ಪತಂಗಗಳಂತೆ ಭಸ್ಮವಾಗಿಹೋಗಲಿ! ಅಥವಾ ದೇವಲೋಕದ ಇಂದ್ರನ ಕುಹಕವೋ? ವಜ್ರಾಯುಧದ ಹೆಮ್ಮೆಯೋ? ಅಮೃತಪಾನದ ಮದವೋ? ಇಂದ್ರನೇ! ನಿನ್ನ ತ್ರೈಲೋಕ್ಯಾಧಿಪತ್ಯದ ಅವಧಿ ಇಂದಿಗೆ ಮುಗಿಯಿತೆಂದು ತಿಳಿ! ಆಕಾಶವನ್ನು ಭೇದಿಸಿ ಇಂದ್ರಲೋಕವನ್ನು ಪಾತಾಳದಲ್ಲಿ ಅಂಧಂತಮಸ್ಸಿನಲ್ಲಿ ಕೆಡಹುವೆನು !

[ಜಮದಗ್ನಿಯು ಬರುವನು.]

ಜಮದಗ್ನಿ :—(ಕೋಪೋದ್ರಿಕ್ತನಾದ ಭಾರ್ಗವನನ್ನು ನೋಡಿ, ಸಂತೈಸುತ್ತಾ) ಮಗನೇ! ರಾಮಾ! ಶಾಂತನಾಗು! ಇಷ್ಟು ಉದ್ರಿಕ್ತನಾಗಿರುವೆ ಏಕೆ? ಈ ಲೋಕವನ್ನು ನಾಶಮಾಡುವೆಯಾ? ನಿನ್ನ ಈ ಉಗ್ರಕರ್ಮದಲ್ಲಿ ಧರ್ಮವು ಕ್ಷಯವಾಗಿ ಹೋಗದೇ? ತಪಸ್ವಿಗಳಾದ ನಮಗೆ ಶಾಂತಿಯೇ ಸರ್ವಸ್ವವಲ್ಲವೆ? ಶಮಪ್ರಧಾನರಾದ ತಪೋಧನರಲ್ಲಿ ಈ ದಾಹಾತ್ಮಕವಾದ ಕ್ಷಾತ್ರವೇ? ಶಾಂತನಾಗು !

ರಾಮ :—

ತಂದೆಯೇ ವಂದಿಸುವೆನು. ನಿನ್ನ ಈ ತಪೋವನದಲ್ಲಿ ನಡೆದ ಅತ್ಯಾಚಾರವು ಸಾಧಾರಣವಾದುದಲ್ಲ. ನಿನ್ನ ಈ ಆಶ್ವಾಸನದಿಂದ

ನನಗೆ ಸಮಾಧಾನವಾಗುವುದಿಲ್ಲ. ಈ ಕ್ರೂರಕರ್ಮಗಳನ್ನೆಸಗಿದ ದುರಾತ್ಮನಾರು? ಅಪ್ಪಣೆಮಾಡು. ಅವನನ್ನು ವಿನಾಶಮಾಡುವೆನು.

ಜಮದಗ್ನಿ :—

ರಾಮ! ಲೋಕರಕ್ಷಣೆಯ ಭಾರವನ್ನು ಹೊತ್ತಿರುವ ಚಕ್ರವರ್ತಿ ಕಾರ್ತ್ಯವೀರ್ಯಾರ್ಜುನನು ಈ ತಪೋವನದಲ್ಲಿ ಸ್ವಚ್ಛಂದವಾಗಿ ಬೇಟೆಯಾಡಿದನು. ಆದರಿಂದ ಆಶ್ರಮಮೃಗಗಳು ಸತ್ತವು. ಆಶ್ರಮವು ಅಪವಿತ್ರವಾಗಿದೆ. ಶಾಂತಿಕರ್ಮಗಳಿಂದ ಶುದ್ಧಿಗೈಯ್ಯುವೆನು. ನೀನೂ ಶಾಂತನಾಗು.

ಆಶ್ರಮವಾಸಿಗಳು :—

ರಾಮ! ನಮಗೆ ರಕ್ಷಕರಿಲ್ಲ. ರಾಜರ ಅತ್ಯಾಚಾರವು ಮೇರೆ ಮೀರಿದೆ. ಸಹಿಸುವ ಶಕ್ತಿಯೂ ನಮಗಿಲ್ಲ. ಭಯತ್ರಸ್ತರಾಗಿದ್ದೇವೆ. ತಪೋವನಗಳು ರಾಜರ ವಿಹಾರಸ್ಥಾನಗಳಾದುವು. ವನವಾಸಿಗಳಿಗೆ ಇಂದು ರಕ್ಷಕರಿಲ್ಲ. ಆರ್ತತ್ರಾಣಕ್ಕಾಗಿ ರಾಜರ ಕೈಯ್ಯಲ್ಲಿರುವ ಶಸ್ತ್ರಗಳು ಲೋಕಪೀಡೆಗೆ ಉಜ್ಜುಗಿಸುತ್ತಿವೆ. ತಪೋವನಗಳಲ್ಲಿ ಶಾಂತಿಯಿಲ್ಲ. ಧರ್ಮರಕ್ಷಕರಿಲ್ಲ. ನಿರಪರಾಧಿಗಳಾದ ಬ್ರಾಹ್ಮಣರನ್ನು ಕಂಡರೆ ಇಂದು ಎಷ್ಟು ತಿರಸ್ಕಾರ! ಧರ್ಮದ ಮೇಲೆ ಎಷ್ಟು ಆಘಾತ ಪ್ರಘಾತಗಳು! ರಾಜರು ಧರ್ಮ ವಿಮುಖರಾಗಿದ್ದಾರೆ. ಭೋಗಕ್ಕಾಗಿ ಪ್ರಜಾಪೀಡೆ! ವಿಹಾರಕ್ಕಾಗಿ ವನವಾಸಿಗಳ ಹಿಂಸೆ! ತಪಸ್ಸಾಮ್ರಾಜ್ಯಚಕ್ರವರ್ತಿಯಾದ ಜಮದಗ್ನಿ ಮಹರ್ಷಿಯ ಆಶ್ರಮದಲ್ಲಿಯೇ ಇಷ್ಟು ಘೋರಹಿಂಸೆ! ಶಸ್ತ್ರಾಸ್ತ್ರಗಳ ಆದ್ಯಾಚಾರ್ಯನೆಂದು ಲೋಕವಿಖ್ಯಾತನಾದ ಭಾರ್ಗವ ರಾಮನ ರಕ್ಷಣೆಯಲ್ಲಿಯೇ ಇಷ್ಟು ನಿರ್ಭಯವಾಗಿ ಅತ್ಯಾಚಾರ ಸಂಭವಿಸಿದ ಮೇಲೆ ಇನ್ನು ನಮ್ಮಂಥಾ ಸಾಮಾನ್ಯರ ಪಾಡೇನು? ಇನ್ನು ಮೇಲೆ ಯಾವ ಆಶ್ರಮದಲ್ಲಿತಾನೇ ತಪಸ್ಸು ನಿರುಪಾಧಿಕವಾಗಿ ಜರುಗಬಹುದು? ನಾವು ತಪಸ್ಸಿಲ್ಲದೇ,

ಈ ಅಪಮಾನವನ್ನು ಸಹಿಸುತ್ತಾ, ಆಹಾರ ನಿದ್ರಾ ಭಯ ಚಮತ್ಕಾರ ಗಳಲ್ಲಿ ಮಗ್ನರಾಗಿ ಭೂಮಿಗೆ ಭಾರವಾಗಿ ಜೀವಿಸಿರುವುದೇಕೆ? ಇಲ್ಲ ನಾವೆಲ್ಲರೂ ಪ್ರಾಯೋಪವೇಶ ಮಾಡುವೆವು. ಈ ಪ್ರಪಂಚವು ಕಾಮೋಪ ಭೋಗಗಳಿಂದಲೇ ಬದುಕಿರುವುದಾದರೆ ಇರಲಿ ಅಲ್ಲವೇ ಹಾಳಾಗಿ ಹೋಗಲಿ !!

ಸ್ವರ್ಣಧೇನು :—

ರಾಮಾ ! ಈ ಲೋಕದಲ್ಲಿ ಅಧರ್ಮವು ಎಷ್ಟು ಹಬ್ಬಿಹೋಗಿದೆ ನಿನಗೆ ಕಾಣುತ್ತಿಲ್ಲವೆ? ಎಷ್ಟು ಗೋ ಬ್ರಾಹ್ಮಣರ ಹಿಂಸೆಯು ಎದ್ದಿದೆ. ನಿನ್ನ ಮನಸ್ಸಿಗ ಚುಚ್ಚುತ್ತಲಿಲ್ಲವೇ? ರಾಜಾಶ್ರಯದಲ್ಲಿ ಹೀನಸತ್ವ ರಾದ ಬ್ರಾಹ್ಮಣರು ಕ್ಷತ್ರಿಯರ ದಾಸರಾಗಿದ್ದಾರೆ. ಯಜ್ಞಸಾಧನ ವಾದ ಗೋವುಗಳನ್ನು ಭೋಗಸಾಧನವಾಗಿ ಬಳಸಿಕೊಳ್ಳುತ್ತಾರೆ. ಲೋಕಮರ್ಯಾದೆಯು ಇಷ್ಟುಕೆಟ್ಟು ಹೋಗಿದೆ. ಈಗ ಕ್ಷತ್ರಿಯರ ಭೋಗೋಚ್ಛೆಯ ಚಾಪಹಸ್ತವು ತಪೋವನಗಳ ಮೇಲೆಯೂ ಹರಿ ದಾಡಲಾರಂಭವಾಗಿದೆ. ಅವರ ರಸಾಸ್ವಾದದ ಜಿಹ್ವೆಯು ನನ್ನ ಅಮೃತವನ್ನು ಬಲಾತ್ಕಾರದಿಂದ ಹೀರಲು ತವಕ ಪಡುತ್ತಿದೆ.

ಕಾರ್ತವೀರ್ಯನು ಕ್ಷತ್ರಿಯ ಕುಲೋದ್ಭವನಾದ ಚಕ್ರವರ್ತಿ ಯಾದರೂ ಅತ್ಯಾಚಾರಿಯಾದ ಹುಲುಮಾನವನಂತಾಗಿದ್ದಾನೆ. ನನ್ನನ್ನು ಈ ಪುಣ್ಯಭೂಮಿಯಿಂದ ಆ ಪಾಪಭೂಮಿಗೆ ಬಲತ್ಕಾರದಿಂದ ಸೆಳದೊಯ್ಯಬೇಕೆಂದು ಹಿಡಿದು ಎಳೆದಿದ್ದಾನೆ. ನನ್ನಮೇಲೆ ನಿಷ್ಕಾರ ಣವಾಗಿ ಬಾಣಪ್ರಯೋಗ ಮಾಡುವಷ್ಟು ದುರಾತ್ಮನಾಗಿದ್ದಾನೆ. ಜಮದಗ್ನಿಯನ್ನು "ಬಂದಿ" ಎಂದು ತಿರಸ್ಕರಿಸಿ ಪದಾಘಾತ ಮಾಡಿದ್ದಾನೆ. ನನ್ನನ್ನು ಭೋಗವಸ್ತುವೆಂದು ಎಳೆದಾಡಿದ್ದಾನೆ. ಆಶ್ರಮದ ಸಾಧುಮೃಗಗಳನ್ನು ವಿಹಾರಕ್ಕಾಗಿ ಹಿಂಸಿಸಿದ್ದಾನೆ. ಮದೋನ್ಮತ್ತನಾಗಿ ತಪಸ್ವಿಗಳ ಮನನೋಯಿಸಿ

ದ್ದಾನೆ. ರಾಮಾ ! ನಾನು ಈ ಅತ್ಯಾಚಾರಗಳನ್ನು ಸಹಿಸಲಾರೆ; ಈ ಘೋರದೃಶ್ಯವನ್ನು ನೋಡಲಾರೆ ! ಈ ಭೂಲೋಕದಲ್ಲಿರಲಾರೆ !

ಈ ಲೋಕವನ್ನು ರಕ್ಷಿಸು ! ಉನ್ಮತ್ತರನ್ನು ಶಿಕ್ಷಿಸು ! ಧರ್ಮವನ್ನು ಉದ್ಧರಿಸು !

ಭಾರ್ಗವ :—

ಮಾತೆಯೇ! ನೀನು ದುಃಖಿಸಬೇಡ! ತಪಸ್ವಿಗಳೇ ಭಯವನ್ನು ಬಿಡಿರಿ !!

ಈ ಗೋ ಬ್ರಾಹ್ಮಣರ ಸಂತಾಪವನ್ನು ಸಹಿಸಲಾರೆ! ಪೂಜ್ಯರ ಧಿಕ್ಕಾರವನ್ನು ನೋಡುತ್ತಿರಲಾರೆ! ಲೋಕದ ಕಷ್ಟವನ್ನು ಮರೆಯಲಾರೆ !

ಇಗೋ ! ಪ್ರತಿಜ್ಞೆಮಾಡುವೆನು. ನನ್ನ ಅಖಂಡ ತಪಸ್ಸಿನ ಮೇಲೆ ಆಣೆಯಿಟ್ಟು ಶಪಥಮಾಡುತ್ತೇನೆ.

ಸೂರ್ಯ, ಚಂದ್ರ, ನಕ್ಷತ್ರಗಳು, ಭೂಮಿ, ಆಕಾಶ, ಇವೆಲ್ಲವೂ ಸಾಕ್ಷಿ ! " ಈ ಭೂಮಿಯಲ್ಲಿ ಮದೋನ್ಮತ್ತರಾದ ಕ್ಷತ್ರಿಯರನ್ನು ನಿರ್ಮೂಲಮಾಡುವೆನು ಕಾರ್ತವೀರ್ಯನನ್ನು ಸಂಹರಿಸಿ ಈ ಲೋಕವನ್ನು ರಕ್ಷಿಸುವೆನು. ನನ್ನ ಶಸ್ತ್ರಾಸ್ತ್ರಗಳ ಜ್ವಾಲೆಯಲ್ಲಿ ಕ್ಷತ್ರಕುಲವು ಭಸ್ಮವಾಗಿ ಹೋಗಲಿ "

ಜಮದಗ್ನಿ :—

ರಾಮನೇ ! ಎಂಥಾ ಪ್ರತಿಜ್ಞೆ ! ಎಷ್ಟು ಕೋಪ ಎಷ್ಟು ತಾಪ ! ಲೋಕಮರ್ಯಾದೆಯನ್ನು ನಾಶಮಾಡುವೆಯಾ ? ನೀನು ಕ್ಷತ್ರಕುಲಕ್ಷಯವನ್ನುಮಾಡಿಬಿಟ್ಟರೆ ಈ ಲೋಕವನ್ನು ರಕ್ಷಿಸುವರಾರು ? ನಿನ್ನ

ಕ್ರೋಧಾವೇಶದಲ್ಲಿ ಲೋಕಸಂಹಾರವಮಾಡುವೆಯಾ ? ಲೋಕಮರ್ಯಾದೆಯು ನಾಶವಾಗಿಹೋದಮೇಲೆ ಧರ್ಮವೆಲ್ಲಿ ಬಂತು! ಧರ್ಮರಕ್ಷಣೆ ಎಲ್ಲಿಬಂತು !

ರಾಮ :—

ಯಾವ ಧನುಸ್ಸಿನಿಂದ ಕ್ಷತ್ರಕ್ಷಯವನ್ನು ಮಾಡುವೆನೋ ಅದೇ ಧನುಸ್ಸಿನಿಂದ ಲೋಕರಕ್ಷಣೆಯನ್ನು ಮಾಡುವೆನು.

ಜಮದಗ್ನಿ :—

ಧರ್ಮಚ್ಯುತನಾಗಿ ಕ್ಷತ್ರವೃತ್ತಿಯನ್ನವಲಂಬಿಸುವೆಯಾ ?

ರಾಮ :—

ಕ್ಷತ್ರಕುಲಾಂತಕನಾಗಿ ಧರ್ಮರಕ್ಷಣೆಮಾಡುವೆನು.

ಜಮದಗ್ನಿ :—

ತಪಃಪ್ರಭಾವದಿಂದ, ಶಾಂತಿಯಿಂದ, ಧರ್ಮಸಂಸ್ಥಾಪನೆಯಾಗದೇ ?

ರಾಮ :—

ಆಗುವುದು. ಆ....ಗು....ವು....ದು. ಆದರೆ ದುಷ್ಟಶಿಕ್ಷಣವು ತಪಃಶ್ಶಕ್ತಿಯಿಂದಲ್ಲ! ಶಸ್ತ್ರದಿಂದಲೇ ದುಷ್ಟಶಿಕ್ಷಣೆ ಶಿಷ್ಟಪರಿಪಾಲನೆ!

ಜಮದಗ್ನಿ :—

ಅದು ರಾಜಧರ್ಮ ! ಶಸ್ತ್ರವೃತ್ತಿಯಿಂದ ನೀನೂ ಕ್ಷತ್ರಿಯನಾಗುವೆಯಾ ?

ರಾಮ :—

ತಥಾಸ್ತು ! ಅಂದು ಅದು ಕ್ಷಾತ್ರಧರ್ಮ ಇಂದು ಅದು ಬ್ರಾಹ್ಮಣಧರ್ಮ ! ಅದು ಶ್ರೀಮನ್ನಾರಾಯಣನ ಸನಾತನಧರ್ಮ

ಜಮದಗ್ನಿ :—

ರಾಮನೇ ! ನಿನ್ನ ಪ್ರತಿಜ್ಞೆಯು ಮಹತ್ತರವಾದುದು. ಕಾರ್ತ್ಯವೀರ್ಯನು ಸಾಧಾರಣನಲ್ಲ ಅವನ ಪರಾಕ್ರಮವು ಮಹಾವಿಷ್ಣುವಿನ ಸುದರ್ಶನಕ್ಕಿಂತಲೂ ಮಿಗಿಲಾದುದು. ಅವನ ತಪಃಪ್ರಭಾವವು ಅತಿಶಯವಾದುದು. ಅವನು ಈ ಸಮಗ್ರ ಪೃಥ್ವೀಮಂಡಲದ ಚಕ್ರವರ್ತಿಯು ಅವನಿಗೆ ಬಲವಿದೆ, ಪರಾಕ್ರಮವಿದೆ ತೇಜಸ್ಸಿದೆ. ಎಂತಹ ಪ್ರತಿಜ್ಞೆಮಾಡಿಬಿಟ್ಟೆ ! ಪ್ರಳಯವೇ ಸನ್ನಿಹಿತವಾದಂತಿದೆ

ರಾಮ :—

ತಾತನೇ ! ಆಚಾರ್ಯನೇ ! ಬ್ರಹ್ಮನಿಷ್ಠನಾದ ನಿನಗೆ ಈ ಮನಸ್ಸಿನ ದೌರ್ಬಲ್ಯವೆಲ್ಲಿ ಬಂತು ? ಪುತ್ರವಾತ್ಸಲ್ಯವು ಪಾಪಶಂಕಿಯಾಗಿದೆ. ಅವನಿಗೆ ಎಷ್ಟು ಭುಜಬಲವಿದ್ದರೇನು ? ಎಷ್ಟು ತಪಃಪ್ರಭಾವವಿದ್ದರೇನು ? ಧರ್ಮಮಾರ್ಗವನ್ನು ಬಿಟ್ಟಮೇಲೆ ಎಲ್ಲವೂ ಇಲ್ಲದಂತೆಯೇ !

ತಂದೆಯೇ ! ನನ್ನ ಪರಾಕ್ರಮದಲ್ಲಿ ನಿನಗೆ ಶಂಕೆಯೇ ? ಆ ಕಾರ್ತ್ಯವೀರ್ಯನು ಹಾಗಿರಲಿ ಇಂದ್ರನೇ ಸಾಕ್ಷಾತ್ತಾಗಿ ಅವನಿಗೆ ಸಹಾಯಕ್ಕೆ ಬಂದರೂ ಅವನ ವಜ್ರವನ್ನು ಪುಡಿಪುಡಿಮಾಡುವೆನು ದಿಕ್ಪಾಲಕರು ಬಂದರೂ ಒಂದೇ ಬಾಣದಿಂದ ಹಾರಿಸಿಬಿಡುವೆನು.

ಈಗ ಅವನ ರಕ್ಷಕರಾರು ? ಶ್ರೀಮನ್ನಾರಾಯಣನೋ ? ಅವನನ್ನು ಕ್ಷೀರಸಾಗರದಿಂದ ಮೇಲಕ್ಕೇಳದಂತೆ ಮುಳುಗಿಸಿಬಿಡುವೆನು. ಅವನ ಸುದರ್ಶನ ಚಕ್ರವನ್ನು ಅಲುಗಾಡದಂತೆ ನಿಸ್ತೇಜವಾಗಿ ಮಾಡುವೆನು.

ಇನ್ನಾರು ಅವನ ತ್ರಾತರು ? ಆ ರುದ್ರ ತ್ರಿಣೇತ್ರ ತ್ರಿಪುರಾಂತಕನೋ ? ಅವನ ತ್ರಿಶೂಲವನ್ನು ಮೊಂಡುಮಾಡುವೆನು. ಮುಂದು ಒಗೆಯುವೆನು. ಮತ್ತಾರು ?

ಆ ಬ್ರಹ್ಮ ಸ್ವಯಂಭೂ ಚತುರಾನನನೋ? ಅವನನ್ನು ಆ ಪದ್ಮಾಸನದಲ್ಲಿಯೇ ಕಟ್ಟಿಹಾಕುವೆನು! ಅವನ ಕೈಗಳಿಗೆ ಚಲನೆಯಿಲ್ಲದಂತೆ ಮಾಡುವೆನು. ಆ ಸೃಷ್ಟಿಕಾರ್ಯವನ್ನೇ ನಿಲ್ಲಿಸಿಬಿಡುವೆನು.

ಈ ಅಸ್ತ್ರದಿಂದ ಈ ಕ್ಷಣದಲ್ಲಿ ಪ್ರಳಯಾಗ್ನಿಯನ್ನು ಸೃಷ್ಟಿಸಿಬಿಡುವೆನು. ಅದರಲ್ಲಿ ಸಮಸ್ತ ಲೋಕಗಳೂ ಸುಟ್ಟುಹೋಗಲಿ! ಸೂರ್ಯ, ಚಂದ್ರ, ನಕ್ಷತ್ರಗಳು, ಭೂಮಿ, ಆಕಾಶ ಎಲ್ಲವೂ ಆ ಪ್ರಳಯಾಗ್ನಿಯಲ್ಲಿ ಬಿದ್ದುಬೀಳಲಿ! ಇಂದೇ ಪ್ರಳಯವಾಗಿ ಹೋಗಲಿ!

ಸ್ವರ್ಣಧೇನು :—

ಭಾರ್ಗವನೇ! ನಿನ್ನ ಪ್ರತಿಜ್ಞೆಯಿಂದ ಲೋಕಕಲ್ಯಾಣವಾಗುವುದು. ನಾನು ಸಂತುಷ್ಟಳಾಗಿದ್ದೇನೆ. ನಿನ್ನ ಮಹಾಪ್ರತಿಜ್ಞೆಗೆ, ನಿನ್ನ ಮಹತ್ಕಾರ್ಯಕ್ಕೆ, ಮಹಾಸತ್ವಕ್ಕೆ ಅನುಗುಣವಾದ ಮಹಾಧನುಸ್ಸನ್ನು ನಿರ್ಮಾಣ ಮಾಡಿಕೊಡುವೆನು.

ರಾಮ :—

ತಾಯೇ! ನಿನ್ನ ಹೃದಯದಲ್ಲಿ ಅನುತಾಪ! ದುಃಖ ಕ್ರೋಧಗಳು ಜ್ವಲಿಸುತ್ತಿವೆ ಪ್ರತಿಹಿಂಸೆಯ ಆವೇಶವು ಎದ್ದಿದೆ. ಅದರಿಂದ ಕ್ಷತ್ರಕ್ಷಯವು ಮಾತ್ರವಲ್ಲ: ಲೋಕವೇ ಅಸ್ತಮಿಸುವಂತಹ ಘೋರ ಶಕ್ತಿಯು ನಿರ್ಮಾಣವಾಗುವುದು. ಆ ಶಕ್ತಿಯನ್ನು ಧರಿಸಿ ನನ್ನ ಪ್ರತಿಜ್ಞೆಯನ್ನು ಕ್ಷಣಮಾತ್ರದಲ್ಲಿ ಸಾಧಿಸಬಲ್ಲೆ! ಆದರೆ ಮಾತೆಯೇ ಅದರಿಂದ ಲೋಕಸಂರಕ್ಷಣೆ ಮಾಡಲಾಗುವುದಿಲ್ಲ. ಸಾಧುಗಳ ಪರಿತ್ರಾಣಮಾಡಿ, ದುಷ್ಟರ ವಿನಾಶಮಾಡಿ, ಧರ್ಮಸಂಸ್ಥಾಪನೆ ಮಾಡುವುದಕ್ಕೆ ಅರ್ಹವಾದ ನನಗೆ ಅನುರೂಪವಾದ ಮಹಾಧನುಸ್ಸು ವರುಣಲೋಕದಲ್ಲಿರುವುದು. ವರುಣನನ್ನು ಧ್ಯಾನಮಾಡಿ ಆ ಧನುಸ್ಸನ್ನು ಬರಮಾಡುವೆನು.

[ರಾಮನು ಧ್ಯಾನಮಾಡುವನು]

ತಪೋವನವೆಲ್ಲವೂ ಸ್ವರ್ಣಛ್ಛಾಯೆಯಿಂದ ಆವೃತವಾಗುವುದು. ಘೋರಕೃತ್ಯಗಳಿಂದ ಅಪವಿತ್ರವಾಗಿದ್ದ ಆಶ್ರಮವು ಪವಿತ್ರತೆಯಿಂದ ಬೆಳಗುವುದು. ವೃಕ್ಷ ಲತೆಗಳೆಲ್ಲವೂ ಫಲಪುಷ್ಪ ಭರಿತವಾಗಿ ಕಂಗೊಳಿಸುವುವು. ಆಶ್ರಮ ಮೃಗಗಳೆಲ್ಲವೂ ಆಹ್ಲಾದದಿಂದ ನಲಿದು ನರ್ತಿಸುವುವು. ಪಕ್ಷಿಗಳು ಮನೋಹರವಾಗಿ ಧ್ವನಿಮಾಡುವುವು. ಸ್ವರ್ಣಧೇನುವು ಆಮೋದದಿಂದ ಅಮೃತವರ್ಷ ಕರೆಯುವಳು. ತಪಸ್ವಿಗಳ ಹೃದಯದಲ್ಲಿ ಆನಂದಲಹರಿ ಎದ್ದು ವೇದವಾಕ್ಯಗಳು ಹೊರಡುವುವು.

ವರುಣದೇವನು, ಸ್ವರ್ಣಮಯಮೂರ್ತಿ, ದಿವ್ಯಾಭರಣ ಭೂಷಿತ, ದಿವ್ಯಮಾಲ್ಯಾಂಬರಧರನಾಗಿ ಮುಂದೆ ನಿಂತು ಅಮೃತಹಸ್ತವನ್ನು ನೀಡಿ ದಿವ್ಯವಾಣಿಯಿಂದ

ರಾಮಾ! ಭಾರ್ಗವನೇ ಇದೋ ತಂದಿರುವೆನು. ತೆಗೆದುಕೋ ಈ ವೈಷ್ಣವ ಧನುಸ್ಸನ್ನು ಧರಿಸು. ಲೋಕವನ್ನು ರಕ್ಷಿಸು, ಧರ್ಮವನ್ನುದ್ಧರಿಸು.

(ರಾಮನ ಕೈಗೆ ಧನುಸ್ಸನ್ನು ಕೊಡುವನು)

ಭಾರ್ಗವನು :—

(ವರುಣದೇವನನ್ನು ಸ್ತುತಿಸಿ, ಪೂಜಿಸಿ, ಸ್ವರ್ಣಧೇನುವನ್ನು ವಂದಿಸಿ, ಜಮದಗ್ನಿಗೆ ನಮಸ್ಕರಿಸಿ, ಮಹಾಧನುಸ್ಸನ್ನು ಕೈಯ್ಯಲ್ಲಿ ಧರಿಸುವನು. ಹೆದೆಯನ್ನೇರಿಸಿ)

“ಠಂ”ಕಾರಮಾಡುವನು. ಅದರಿಂದ ದೇದೀಪ್ಯಮಾನವಾದ ತೇಜಸ್ಸು ಉದ್ಭವಿಸಿ ಚತುರ್ದಶ ಭುವನಗಳನ್ನೂ ಆವರಿಸುವುದು

---

## ವಿಷ್ಕಂಭ

---

ಮಾಹಿಷ್ಮತೀ ಪಟ್ಟಣದ ರಾಜಬೀದಿ.

ಚಾರುದತ್ತ :—

ನಮ್ಮ ಮಹಾರಾಜನು ಮೃಗಯಾ ವಿಹಾರದಿಂದ ಹಿಂದಿರುಗಿದ ಮೇಲೆ ಏನೋ ಮನ ಮುರತವನಂತೆ ಇರುವನು. ಏನೋ ಚಿಂತೆ! ಏನೋ ಕ್ರೋಧ ! ಆಕ್ರೋಶ !

ಸಿದ್ಧಾರ್ಥಕ :—

ಮಹಾರಾಜನು ಬೇಟೆಯಾಡುತ್ತಾ ಭೃಗುಮಹರ್ಷಿಯ ಆಶ್ರಮಕ್ಕೆ ಹೋದನಂತೆ! ಅಲ್ಲಿ ಒಂದು ಸ್ವರ್ಣಧೇನುವಿದೆಯಂತೆ. ಮಹಾರಾಜನು ಆಶೆಯಿಂದ ಬಯಸಿದನಂತೆ! ಋಷಿಗಳು ಕೊಡಲೊಪ್ಪಲಿಲ್ಲವಂತೆ. ಏನೇನೋ ಆಯಿತಂತೆ!

ಚಾರುದತ್ತ : —

ಚಕ್ರಾಧೀಶನು ಬಡಬ್ರಾಹ್ಮಣರಲ್ಲಿರುವ ಗೋವನ್ನು ಕೇಳುವುದೆಂದರೇನು ? ಅವರು ಇಲ್ಲಾ ಎಂದರೆ ಆಗ್ರಹವೇಕೆ ?

ಸಿದ್ಧಾರ್ಥಕ :—

ಅಲ್ಲಿ ಏನೇನೋ ಆಯಿತಂತೆ. ಮಹರ್ಷಿಗೆ ಅಪಮಾನವಾಯಿತಂತೆ. ಗೋವನ್ನು ರಾಜಭಟರು ಹಿಡಿದೆಳದರಂತೆ.

ಚಾರುದತ್ತ :—

ಮಹರ್ಷಿಗಳು ರಾಜನಿಗೆ ಶಾಪ ಕೊಟ್ಟರೇನು ?

ಸಿದ್ಧಾರ್ಥಕ :—

ಶಾಪವಿಲ್ಲ ಏನೋ ಅಪಜಯವಾಯಿತಂತೆ. ಆದರಿಂದ ರಾಜನು ಬಹಳ ಕೋಪಗೊಂಡಿದ್ದಾನೆ. "ಋಷಿಗಳು ಕೊಬ್ಬಿಹೋಗಿದ್ದಾರೆ. ಅವರನ್ನು ಶಿಕ್ಷಿಸಬೇಕು" ಎನ್ನುತ್ತಾನೆ.

ಚಾರುದತ್ತ :—

ಏನುಕಷ್ಟ ಬಂತಪ್ಪಾ ? ಕಾಡಿನಲ್ಲಿ ತಪಸ್ಸು ಮಾಡುವ ಋಷಿಗಳಿಗೆ ನಮ್ಮ ಕಷ್ಟವೇನು ಗೊತ್ತು ? ನಮ್ಮ ಮಹಾರಾಜನು ಆ ಋಷಿಗಳ ಮೇಲಿನ ಕೋಪವನ್ನು ನಗರವಾಸಿಗಳಾದ ಬ್ರಾಹ್ಮಣರ ಮೇಲೆ ತೀರಿಸುತ್ತಾನೆ. ನಮಗೆ ತಾನೆ ಕಷ್ಟ ?

ಸಿದ್ಧಾರ್ಥಕ :—

ಅಯ್ಯೋ ! ಭೃಗುಮಹರ್ಷಿಗಳೇನು ಸಾಮಾನ್ಯರೆ ? ಅವರಿಗೆ ಕೋಪಬಂದರೆ ರಾಜರು, ರಾಜ್ಯ, ಸಂಪತ್ತು, ವೈಭವ, ಎಲ್ಲಾ ಬಟ್ಟಬಯಲಾಗಿ ಹೋಗುವುವು.

ಚಾರುದತ್ತ :—

ಕಾರ್ತ್ಯವೀರ್ಯನೂ ಸಾಧಾರಣನಲ್ಲ. ಮಹಾಪರಾಕ್ರಮಶಾಲಿ. ತಪಸ್ಸಿನಿಂದ ಎಲ್ಲ ಶಕ್ತಿಗಳನ್ನು ಪಡೆದಿದ್ದಾನೆ.

ಸಿದ್ಧಾರ್ಥಕ :—

ಆ ಪರಾಕ್ರಮದ ಮಾತೇ ? ನೀನು ಕೇಳಿ ಅರಿಯೆಯಾ ? ಆ ಭಾರ್ಗವ ರಾಮನು ಖತಿಗೊಂಡರೆ ಇಂದ್ರಾದಿ ದೇವತೆಗಳು ನಡುಗುತ್ತಾರೆ.

ಚಾರುದತ್ತ :—

ಆ ವೀರ್‍ಯ ಪರಾಕ್ರಮಗಳನ್ನು ಕಟ್ಟಿಕೊಂಡು ನಮಗೇನು ? ನಮಗೆ ನಮ್ಮ ರಾಜನೇ ಹೆಚ್ಚು, ರಾಜನೇ ರಕ್ಷಕನು, ರಾಜನೇ ದೇವರು.

ನಾವಿಷ್ಣು ಪೃಥಿವೀಪತಿಃ

ಸಿದ್ಧಾರ್ಥಕ :—

ಅದು ಈ ರಾಜ್ಯದ ಮಾತು! ತಪ್ರೋ ರಾಜ್ಯದ ಮಾತೇ ಬೇರೆ. ನಮಗೆ ರಾಜನೇ ಹೆಚ್ಚು ಅವರಿಗೆ ಮಾನವೇ ಹೆಚ್ಚು ಸ್ವಾತಂತ್ರ್ಯವೇ ಹೆಚ್ಚು ಸತ್ಯವೇ ಹೆಚ್ಚು !

ಅವರಿಗೆ ಕೋಪಬಂದರೆ "ಅನ್ಯಮಿಂದ್ರಂ ಕರಿಷ್ಯಾಮಿ ಲೋಕ ಮಾಸ್ಯಾದನಿಂದ್ರಕಂ."

———

## ತೃತೀಯ ದೃಶ್ಯ

---

ಕಾರ್ತ್ಯವೀರ್ಯನು ಅಂತಃಪುರದಲ್ಲಿ ಸ್ತ್ರೀವಿಲಾಸಮಗ್ನನಾಗಿರುವನು

ದೌವಾರಿಕೆಯು ಪ್ರವೇಶಿಸಿ ನೆಲಮುಟ್ಟಿ ನಮಸ್ಕರಿಸಿ

ಮಹಾರಾಜನೇ!

ಕಾರ್ತ್ಯವೀರ್ಯ :—
(ಮುಗುಳುನಗೆಯಿಂದ ಕಣ್ಣುಸನ್ನೆಮಾಡಿ) ಏನದು ?

ದೌವಾರಿಕೆ :—
ದೇವರ್ಷಿಯಾದ ನಾರದರು ಬಂದು ಕಾದಿರುವರು.

ಕಾರ್ತ್ಯವೀರ್ಯ :—
ನಾರದರು ಬಂದಿರುವರೇ ? ತಡವೇಕೆ ? ಅಡ್ಡಿಯೇನು ? ಅಂತಃಪುರದಲ್ಲಿಯೇ ದರ್ಶನವನ್ನು ಕೊಡಲಿ!

ದೌವಾರಿಕೆಯು ವೀಣಾಪಾಣಿಯಾದ ನಾರದನನ್ನು ಒಳಗೆ ಕರತರುವಳು.

ಅಂತಃಪುರ ರಮಣಿಯರೆಲ್ಲರೂ ವಿಲಾಸದಿಂದ ಎಚ್ಚತ್ತು ಭಯ ಲಜ್ಜೆಗಳಿಂದ ಸರಿದು ನಿಲ್ಲುವರು. ಕಾರ್ತ್ಯವೀರ್ಯನು ಮದಘೂರ್ಣಿತ ಲೋಚನಗಳನ್ನು ತಿರುಗಿಸುತ್ತಾ. ಹಸನ್ಮುಖಿಯಾಗಿ ತೋಳುಗಳನ್ನು ಉದಾರವಾಗಿ ಎತ್ತಿ,

ಬ್ರಹ್ಮರ್ಷಿಯೇ! ಕಾರ್ತ್ಯವೀರ್ಯನು ಅಭಿವಂದಿಸುವನು.

(ನಾರದನು ಮಂದಹಾಸದಿಂದ ವೀಣೆಯನ್ನು ಝೇಂಕರಿಸಿ) ಚಕ್ರವರ್ತಿಯೇ! ವಿಜಯಿಯಾಗು.

ಕಾರ್ತ್ಯವೀರ್ಯ :—

ನಾರದಮಹರ್ಷಿಯೇ! ಆಸನವನ್ನಲಂಕರಿಸು.

(ಸ್ತ್ರೀಯರು ಸಂಭ್ರಮದಿಂದ ಭದ್ರಾಸನವನ್ನು ತಂದಿಡುವರು. ನಾರದನು ಭದ್ರಾಸನದ ಮೇಲೆ ಕಾರ್ತ್ಯವೀರನು ಹಂಸ ತೂಲಿಕಾ ತಲ್ಪದಲ್ಲಿ ಕುಳಿತುಕೊಳ್ಳುವರು)

ಕಾರ್ತ್ಯವೀರ್ಯ :—

ಮಹರ್ಷಿಯೇ! ಇಲ್ಲಿಗೆ ದಯಮಾಡಿಸಿದ ಮಹತ್ಕಾರ್ಯವಾವುದಿರುವುದು?

ನಾರದ :—

ಸಾರ್ವಭೌಮನೆ! ನಿನ್ನ ಐಶ್ವರ್ಯ ವೈಭವವನ್ನು ನೋಡಿ ಸಂತೋಷಪಡುವುದಕ್ಕಿಂತಲೂ, ಅತಿಶಯವಾದ ಮಹತ್ಕಾರ್ಯವೇನುಂಟು? ಈ ಚತುರ್ದಶಭುವನಗಳಲ್ಲಿ ಈ ಸುಖ ಸಾಮ್ರಾಜ್ಯವು ಮತ್ತಾವ ಪುರುಷನಿಗುಂಟು? ನಿನ್ನ ಈ ಅಂತಃಪುರವು ಬ್ರಹ್ಮದೇವನ ಮಾನಸ ಸರೋವರಕ್ಕಿಂತಲೂ ಮನೋಹರವಾಗಿರುವುದು. ಶ್ರೀರಮಣನ ವೈಭವಕ್ಕಿಂತ ಅತಿಶಯವಾದ ಈ ಸಂಪತ್ತು, ತ್ರಿಪುರಾಂತಕನ ಪರಾಕ್ರಮ, ಭುಜಬಲಾರ್ಜಿತವಾದ ಚತುರ್ದಶಭುವನಗಳ ಒಡೆತನ, ಈ ವೈಭವವು ನನ್ನಮನವೊಲಿಸಿ ಇಲ್ಲಿಗೆ ಕರೆತಂದಿರುವುದು.

ಕಾರ್ತ್ಯವೀರ್ಯ:—

(ನಸುನಗುತ್ತಾ) ಮಹರ್ಷಿಯೇ! ಇದೇನು ಸ್ತುತಿಯೋ? ಅನುಗ್ರಹವೋ?

ನಾರದ : —

ಅಲ್ಲ ಅಲ್ಲ !

ನನ್ನ ಆನಂದ ಲಹರಿ

ಕಾರ್ತ್ಯವೀರ್ಯ: —

ದೇವರ್ಷಿಯೇ! ಇಂದು ನನ್ನ ಸುಖಸೌಭಾಗ್ಯಗಳು ಪರಿಪೂರ್ಣವಾಗಿವೆ. ಎಲ್ಲ ಲೋಕಗಳ ಸುಖವು ಈ ಭೋಗಮಂದಿರದಲ್ಲಿ ನೆಲಸಿದೆ. ನಂದನವನದಲ್ಲಿ ಜಗಜಗಿಸುವ ದೇವಕನ್ಯೆಯರ ಆನಂದ ನವನ ವಿಹಾರ, ಕ್ಷೀರಸಾಗರದಲ್ಲಿ ಶೇಷಶಯನನ ಲಕ್ಷ್ಮೀವಿಲಾಸ, ಕೈಲಾಸದಲ್ಲಿ ಪಾರ್ವತಿಯನ್ನು ಒಲ್ಲೈಸಿ ತಾಂಡವವಾಡುವ ಪರಮೇಶನ ಸುಖ, ಸರಸತಿಯ ನಗೆ ಮೊಗದಲ್ಲಿ ಮುಗ್ಧನಾಗಿರುವ ಬ್ರಹ್ಮನ ಆನಂದ, ಇವೆಲ್ಲವನ್ನೂ ಒಟ್ಟುಗೂಡಿಸಿದರೂ ಈ ನನ್ನ ಸುಖವನ್ನು ಸರಿಗಟ್ಟಲಾರದು.

ನಾರದ : —

ಹೈಹಯನೇ! ಅದನ್ನು ನಾನು ಬಲ್ಲೆ. ನಿನ್ನ ಸುಖಕ್ಕೆಸರಿ ಇಲ್ಲ. ನಿನ್ನ ಪರಾಕ್ರಮಕ್ಕೆ ಎದುರಿಲ್ಲ

ನಂದನವನದಲ್ಲಿ ವಿಹಾರವಾಡುತ್ತಾ ದೇವಕನ್ಯೆಯರು ನಿನ್ನ ದಿಗ್ವಿಜಯದ ಹಾಡುಗಳನ್ನು ಹಾಡುವರು. ಪಾತಾಳಲೋಕದ ನಾಗಕನ್ಯೆಯರು ನಿನ್ನ ವಿಜಯ ಗೀತೆಗಳನ್ನು ಹಾಡುತ್ತಾ ನರ್ತನವಾಡುವರು. ದೇವತೆಗಳು ನಿನ್ನ ಪರಾಕ್ರಮಕ್ಕೆ ಬೆದರಿ ನಡುಗುವರು. ರಾಕ್ಷಸರು ನಿನ್ನ ಭಯದಿಂದ ಪಾತಾಳದಲ್ಲಿ ಅಡಗಿರುವರು. ಸಮಸ್ತ ಲೋಕಗಳಲ್ಲಿಯೂ ನಿನ್ನ ಕೀರ್ತಿಪತಾಕೆಯು ಹಾರಾಡುತ್ತಿರುವುದು. ಇಲ್ಲಿ ನಿನ್ನ ಸುಖಸಾಮ್ರಾಜ್ಯವು ಬೆಳಗುತ್ತಿರುವುದು.

ಆದರೆ............

ಕಾರ್ತ್ಯವೀರ್ಯ :—

ನಾರದರೆ! ಏನದು ? ಆ ಆದರೆ ...........ಯ ಅರ್ಥವೇನು ?

ನಾರದ :—

ಚಕ್ರವರ್ತಿಯೇ! ನೀನು ಪರಾಕ್ರಮಿಯೇ ಹೌದು. ಆದರೆ ಈ ಭೂಮಿಯ ಆಧಿಪತ್ಯವು ಯಾವಾಗಲೂ ಸ್ಥಿರವಲ್ಲ. ಇದು ಮರ್ತ್ಯ ಲೋಕ! ಇಲ್ಲಿ ದ್ವಂದ್ವಮಯವಾದ ಸಂಸಾರ !

ಕಾರ್ತ್ಯವೀರ್ಯ : —

ನಾರದರೇ! ಪೌರುಷದಲ್ಲಿ ಈ ಸೃಷ್ಟಿಯಲ್ಲಿಯೇ ನನ್ನ ಮುಂದೆ ನಿಲ್ಲಬಲ್ಲ ಪರಾಕ್ರಮಶಾಲಿಯಾವನಿರುವನು? ನಾನು ಭುಜಬಲದಿಂದ ಈ ಚತುರ್ದಶ ಭುವನಗಳನ್ನು ಜಯಿಸಿದ್ದೇನೆ. ಈ ಚರಾಚರ ಸೃಷ್ಟಿಯನ್ನೇ ಸುಖಕ್ಕಾಗಿ ಬಗ್ಗಿಸಿದ್ದೇನೆ ಇಂದು ಸೃಷ್ಟಿಯ ಪರಮೇಶ್ವರನು ನಾನು! ನನ್ನ ಸುಖಕ್ಕಾಗಿಯೇ ಈ ಸೃಷ್ಟಿ! ನನ್ನ ಸಂತೋಷದಿಂದ ಈ ಪ್ರಪಂಚವು ಜೀವಿಸಿದೆ. ನನ್ನ ಕ್ರೋಧದಿಂದ ಇಂದೇ ಪ್ರಳಯವಾಗಿ ಹೋಗುತ್ತದೆ. ಈ ಜಗತ್ತಿನ ಕರ್ತೃ ಕರ್ತನು ನಾನು!

ನಾರದ :—

ಇದು ಅಸ್ಥಿರ ! ಚಂಚಲ !

ಕಾರ್ತ್ಯವೀರ್ಯ :—

ನನ್ನ ಸುಖದಲ್ಲಿ ಕ್ರೋಧವನ್ನೆಬ್ಬಿಸುವುದಕ್ಕೆ, ನನ್ನ ಪರಾಕ್ರಮದಲ್ಲಿ ಕಳಂಕವನ್ನು ಕೋರುವುದಕ್ಕೆ, ಇಲ್ಲಿ ಬಂದಿರುವೆಯಾ ?

ನಾರದ :—

ಅಲ್ಲ ನಿನ್ನ ಹಿತವನ್ನು ಬಯಸುವುದಕ್ಕೆ, ನಿನ್ನ ಭವಿಷ್ಯವನ್ನು ಸೂಚಿಸಿ ಹೋಗುವುದಕ್ಕೆ, ಬಂದಿರುವೆನು.

ಕಾರ್ತ್ಯವೀರ್ಯ :—

ಏನು ಹಿತ? ಯಾರ ಹಿತ? ಯಾರ ಭವಿಷ್ಯ? ಯಾರಿಗೆ ಯಾರು?

ನಾರದ :—

ನಿನ್ನ ಭವಿಷ್ಯ!

ಕಾರ್ತ್ಯವೀರ್ಯ :—

ಏನದು ?

ನಾರದ :—

ಆಶ್ರಮವಾಸಿಗಳೆಲ್ಲರೂ ನಿನ್ನ ಮೇಲೆ ಋತಿಗೊಂಡಿದ್ದಾರೆ.

ಕಾರ್ತ್ಯವೀರ್ಯ :—

ಅವರ ಕ್ರೋಧವು ನನ್ನನ್ನೇನು ಮಾಡಬಲ್ಲುದು ?

ನಾರದ :—

ತಪಸ್ವಿಗಳ ಪ್ರಭಾವವನ್ನರಿಯೆಯಾ ?

ಕಾರ್ತ್ಯವೀರ್ಯ :—

ಓಹೋ! ತಪಸ್ವಿಗಳು ನನ್ನ ಸಾಮ್ರಾಜ್ಯವನ್ನು ಮುರಿಯುವ, ನನ್ನ ಸುಖಕ್ಕೆ ಭಂಗವನ್ನು ತರುವ, ಆಲೋಚನೆ ಮಾಡುತ್ತಿರುವರೋ ? ಅದಕ್ಕಾಗಿ ತಪಸ್ಸನ್ನಾಚರಿಸುವರೋ ?

ನಾರದ :—

ಅಲ್ಲ. ನಿನ್ನ ಹೆಮ್ಮೆಯನ್ನು ಅಣಗಿಸುವ ಪ್ರತಿಜ್ಞೆ !

ಕಾರ್ತ್ಯವೀರ್ಯ :—

ಆ ಬಡ ತಪಸ್ವಿಗಳು ನನ್ನ ಮೇಲೆ ಪರಾಕ್ರಮವನ್ನು ಮಾಡಿ ನೋಡುವರೇ? ಕೈಹಯಾಧಿಪನ ಭ್ರೂಭಂಗದಿಂದ ಈ ಲೋಕವು

ತಲ್ಲಣಿಸುವುದೆಂಬುದು ಅವರಿಗೆ ತಿಳಿಯದೋ? ಶಾಂತಿಧನರೆಂದು ಜಂಭ ಕೊಚ್ಚಿಕೊಳ್ಳುವ ಆ ಋಷಿಗಳಿಗೆ ಇಷ್ಟು ಕ್ರೋಧವೇ? ಕಾರಣವೇನು ?

ನಾರದ :—

ನೀನು ಜಮದಗ್ನಿಮಹರ್ಷಿಯ ಆಶ್ರಮದಲ್ಲಿ ಆಚರಿಸಿದ ಕೃತ್ಯ! ಆ ಸ್ವರ್ಣಧೇನುವಿನ ಮೇಲಿನ ಆಶೆ! ಅತ್ಯಾಚಾರ! ಆ ಸಾಧುಮೃಗಗಳ ಹಿಂಸೆ !

ಕಾರ್ತ್ಯವೀರ್ಯ :—

ಸಾಕು ಸಾಕು. ನಿಲ್ಲಿಸಿ. ಅದು ನನ್ನ ರಾಜ್ಯ! ನನ್ನವಿಹಾರಕ್ಕಾಗಿ ಏನು ಬೇಕಾದರೂ ಮಾಡಬಲ್ಲೆ. ಆ ಧೇನುವು ನನ್ನ ರಾಜ್ಯದ ಧನ!

ನಾರದ :—

ಹಾಗಾದರೆ ತರದೇ ಬಂದೆಯೇಕೆ ?

ಕಾರ್ತ್ಯವೀರ್ಯ :—

ಅದೋ? ಅದು ಭೋಗಸಾಧನವೆಂದು ಅದನ್ನುಬಯಸಿದೆ; ಅಲ್ಲವೆಂದು ತಿರಸ್ಕರಿಸಿ ಬಂದೆ ಅಷ್ಟೆ! ಭೋಗಕ್ಕೆ ಉಪಯೋಗವಿಲ್ಲದ ವಸ್ತುವು ಮೇರುವಿನಷ್ಟು ಚಿನ್ನದ ಬೆಟ್ಟವಾದರೂ, ನನಗೆ ಬೇಡ.

ನಾರದ :—

ಓಹೋ! ಬೇಡದೇ ಬಿಟ್ಟು ಬಂದೆಯಾ? ಅವರು ಬಯಸಿ, ಬಲಾತ್ಕರಿಸಿ, ಸೆಳೆದೆಯೆಂದು ಆಗ್ರಹಗೊಂಡಿರುವರು.

ಕಾರ್ತ್ಯವೀರ್ಯ :—

ಅವರ ಆಗ್ರಹವು ನನ್ನನ್ನೇನು ಮಾಡಬಲ್ಲುದು?

ನಾರದ :—

ಆ ಭಾರ್ಗವ ರಾಮನನ್ನು ಕೇಳಬಲ್ಲೆಯಾ ?

ಕಾರ್ತ್ಯವೀರ್ಯ :—

ಯಾರು ? ಆ ಜಮದಗ್ನಿ ಮಹರ್ಷಿಯ ಮಗನೋ ?

ನಾರದ :—

ಹೌದು ! ಅವನೇ !

ಕಾರ್ತ್ಯವೀರ್ಯ :—

ಆ, ಕೊಡಲಿ ಹಿಡಿದು ಮರಗಳನ್ನು ಕಡಿಯುತ್ತಾ ಕಾಡಿನಲ್ಲಿ ಅಲೆಯುವ ಆ ವನಚರನು, ಈ ಜಗದ್ವಿಜಯಿಯಾದ ಚಕ್ರವರ್ತಿಯನ್ನು ಎದರಿಸುವನೋ ?

ನಾರದ :—

ಆ ಪರಶುರಾಮನು ಸಾಧಾರಣನಲ್ಲ!

ಕಾರ್ತ್ಯವೀರ್ಯ :—

ಆ ರಾಮನು ಅಷ್ಟು ದೊಡ್ಡ ತಪಸ್ವಿಯೋ ?

ನಾರದ :—

ತಪಸ್ಸೇ? ಭಾರ್ಗವನ, ತಪೋಬಲವು ಅಸಾಧಾರಣವಾದುದು ಅದನ್ನು ಕಣ್ಣೆತ್ತಿನೋಡಲು ತ್ರಿಮೂರ್ತಿಗಳಿಗೂ ಶಕ್ಯವಿಲ್ಲ. ಪರಶುರಾಮನು ಕ್ರೋಧಾವೇಶದಿಂದ ಉಗ್ರರೂಪವನ್ನು ಧರಿಸಿದರೆ........ ತ್ರಿಪುರಾಂತಕ ತ್ರಿವಿಕ್ರಮರಿಗಿಂತಲೂ ಒಂದು ಕೈ ಮೇಲು ! ಅವನ ಒಂದೇ ಒಂದು “ ಹುಂ ” ಕಾರದಿಂದ ಈ ಚತುರ್ದಶ ಭುವನಗಳೂ ಭಸ್ಮವಾಗಿ ಹೋದಾವು.

ಕಾರ್ತ್ಯವೀರ್ಯ :—

ಅವನು ತಪೋಬಲದಿಂದ ನಮ್ಮನ್ನು ಧಿಕ್ಕರಿಸುವನೋ? ನೀವು ನನ್ನ ಆ ಶತೃವನ್ನು ನನ್ನ ಮುಂದೆ ಹೊಗಳಿ ನನ್ನನ್ನು ಅಲ್ಲಗಳೆದು ರೇಗಿಸುವಿರೋ ?

ನಾರದ :—

ಮಹಾಧನುರ್ಧಾರಿಯಾದ ಭಾರ್ಗವನು ಭುಜಬಲ ಪರಾಕ್ರಮದಿಂದ ನಿನ್ನನ್ನು ಅಣಗಿಸುವನು. ಹೈಹಯಾಧಿಪನೇ! ಕೇಳು. ನಿನ್ನ ಅತ್ಯಾಚಾರದಿಂದ ತಪಸ್ವಿಕುಲವೆಲ್ಲವೂ ಕ್ಷುಬ್ಧವಾಗಿರುವುದು. ಇಂದು ತಪೋವನಗಳಲ್ಲಿ ನಿನ್ನ ಚಕ್ರಾಧಿಪತ್ಯವಿಲ್ಲ. ಆಶ್ರಮವಾಸಿಗಳು ನಿನ್ನನ್ನು ಸಾರ್ವಭೌಮನೆಂದು ಭಾವಿಸುವುದಿಲ್ಲ. ತಪೋವನಗಳ ರಕ್ಷಕನು ಭಾರ್ಗವ ರಾಮನು. ತಪೋವನಗಳಲ್ಲಿ ರಾಮನು ಯಜ್ಞ ರಕ್ಷಣೆಯ ದೀಕ್ಷೆಯನ್ನು ವಹಿಸಿರುವನು. ಅವನ ಶಸ್ತ್ರಾಸ್ತ್ರಗಳು ಈ ಜಗತ್ತನ್ನು ಕಬಳಿಸಲು ಬಾಯಿತೆರೆದು ಜ್ವಲಿಸುತ್ತಿರುವುವು. ರಾಮನು ಆಗ್ರಹಗೊಂಡು ಸಾಕ್ಷಾತ್ ಯಜ್ಞನಾರಾಯಣನಂತೆ ಧಗಧಗಿಸುತ್ತಿರುವನು.

ಕಾರ್ತ್ಯವೀರ್ಯ :—

ಮೂರು ಲೋಕಗಳು ನನ್ನ ಭುಜಬಲ ಪರಾಕ್ರಮಕ್ಕೆ ತಲ್ಲಣಿಸುತ್ತವೆ. ಈ ಸಹಸ್ರಬಾಹು ಕಾರ್ತ್ಯವೀರ್ಯನಿಗೆ ಆ ಕಿರಾತ ವೃತ್ತಿಯ ಬ್ರಾಹ್ಮಣನು ಎಣೆಯೇ? ಆ ರಾಮನು, ಆ ಆಶ್ರಮದಲ್ಲಿ ಪರಾಕ್ರಮದ ಜಂಭಕೊಚ್ಚಿಕೊಂಡಿದ್ದನ್ನು ಕೇಳಿ ಬ್ರಾಹ್ಮಣರಿಗೆಲ್ಲಾ ಅಹಂಕಾರವು ತಲೆಗೇರಿ ಹೋಗಿರುವಂತಿದೆ. ನೀವೂ ಅದೇ ಭ್ರಾಂತಿಯಿಂದ ಏನೇನೋ ಮಾತನಾಡುತ್ತಿರುವಿರಿ.

ನಾರದ :—

ಹೈಹಯನೇ ! ರಾಮನು ಜಂಭಕೊಚ್ಚಿಕೊಳ್ಳುವ ಪೋರನೇ? ಬ್ರಹ್ಮನಿಷ್ಠರಾದ ತಪಸ್ವಿಗಳಿಗೆ ಅಹಂಕಾರವು ತಲೆಗೇರಿದೆಯೋ ?

ಬ್ರಹ್ಮಮಾನಸಪುತ್ರನಾದ ನಾನು ವೈಮರಿತವನೋ ? ಇವೆಲ್ಲಾ ನಿನ್ನ ಅಂತ್ಯಕಾಲದಲ್ಲಿ ಕಣ್ಣಿಗೆ ಕಾಣುವ ಚಿತ್ರಗಳು.

ಕಾರ್ತ್ಯವೀರ್ಯ :

ಬ್ರಹ್ಮರ್ಷಿಯೇ ! ಇಷ್ಟೊಂದು ಆಗ್ರಹವೇಕೆ ? ನಿನಗೆ ಆ ರಾಮನಲ್ಲಿ ಎಷ್ಟು ಅಭಿಮಾನ! ಆ ಅಭಿಮಾನದಲ್ಲಿ ನನ್ನ ಪರಾಕ್ರಮವನ್ನು ಮರತೇ ಬಿಟ್ಟಿರುವೆ. ಆ ರಾಮನು ನನ್ನನ್ನು ಜಯಿಸುವನೆಂಬುದು ನಿನ್ನಹಂಬಲ! ನಾನು ಯುದ್ಧದಲ್ಲಿ ಸಾಯುವೆನೆಂಬುದು ನಿನ್ನ ಭ್ರಾಂತಿ! ಆ ಲೋಕಕಂಟಕನಾದ ರಾವಣನನ್ನು ಕಟ್ಟಿಕಟ್ಟಿ ತಂದವನು ನಾನಲ್ಲವೇ ? ಅಂದು ತಪಸ್ವಿಗಳಿಗೆ ಅಭಯವಿತ್ತವನು ನಾನಲ್ಲವೆ ? ಕುಬೇರನೊಡನೆ ಯುದ್ಧವು ಸಂಭವಿಸಿದಾಗ ಆ ರಜತ ಗಿರಿಯು ನನ್ನ ಅಬ್ಬರದಲ್ಲಿ ತರಗೆಲೆಯಂತೆ ನಡುಗಿದುದನ್ನು ನೀನು ನೋಡಲಿಲ್ಲವೆ ? ಇದನ್ನು ತಪಸ್ವಿಗಳು ಅರಿಯರೋ ? ಆಗ ಈ ಪರಶುರಾಮನೆಲ್ಲಿ ಅಡಗಿದ್ದ? ಇರಲಿ ಬಾಯಿಮಾತಿನಿಂದ ಫಲವೇನು? ನಾರದರೇ! ಆ ಬ್ರಾಹ್ಮಣನ ಪ್ರತಿಜ್ಞೆಯೇನು! ಶಾಪವೋ? ಛಲವೋ?

ನಾರದ :

ಭಯಂಕರ ಪ್ರತಿಜ್ಞೆ! ಸಮಸ್ತ ಲೋಕಗಳನ್ನು ಅಲ್ಲಕಲ್ಲೋಲ ಮಾಡುವ ವೀರಾವೇಶ!

ಕಾರ್ತ್ಯವೀರ್ಯ :—

ಆ ಪ್ರತಿಜ್ಞೆಯೇನು ? ತಪ್ಪಿದರೆ............?

ನಾರದ :—

ಕಾರ್ತ್ಯವೀರನೇ! ಕೇಳು. ಆ ಭಾರ್ಗವ ರಾಮನು ತಾನು ಆಚರಿಸಿರುವ ತಪಸ್ಸಿನ ಮೇಲೆ ಆಣೆಯಿಟ್ಟು ಬ್ರಹ್ಮನಿಷ್ಠರಾದ ತಪಸ್ವಿ

ಗಳ ಮುಂದೆ ಪ್ರತಿಜ್ಞೆ ಮಾಡಿದ್ದಾನೆ. ಮದೋನ್ಮತ್ತನಾದ ನಿನ್ನ ತಲೆಯನ್ನು ಕಡಿದುರುಳಿಸುವೆನೆಂದು; ನಿನ್ನ ಕುಲವನ್ನು ನಿರ್ಮೂಲ ಮಾಡುವೆನೆಂದು; ಈ ಭೂಮಿಯಿಂದ ಕ್ಷತ್ರಿಯರನ್ನು ತೊಡೆದು ಬಿಡುವೆನೆಂದು. ರಾಜನೇ! ಬೇರೆ ಮಾರ್ಗವೇ ಇಲ್ಲ. ನೀನು ಹೋಗಿ ಆ ರಾಮನಲ್ಲಿ ಕ್ಷಮಾಪ್ರಾರ್ಥನೆ ಮಾಡು.

ಕಾರ್ತ್ಯವೀರ್ಯ :—

ರಾಮನಿಗೆ ನಾನು ಶರಣಾಗತನಾಗುವುದೇ? ಕಾರ್ತ್ಯವೀರ್ಯನು ಯಾರಲ್ಲಿಯೂ ದಯಾಭಿಕ್ಷೆ ಬೇಡುವ ಭಿಕಾರಿಯಲ್ಲ. ಭಯಪಡುವ ಹೇತುವಿಲ್ಲ. ಈ ಭುಜಗಳಲ್ಲಿ ಬಲವಿದೆ. ಈ ಹೃದಯದಲ್ಲಿ ಶಕ್ತಿ ಇದೆ. ಈ ಶರೀರದಲ್ಲಿ ಪೌರುಷವಿದೆ. ಈ ಧನುಸ್ಸಿನಲ್ಲಿ ತೇಜಸ್ಸಿದೆ. ಈ ಕೊಡಲಿಯು ವೀರಾದಿವೀರರ ರಕ್ತಪಾನ ಮಾಡಿ ಹುರಿಗೊಂಡಿದೆ. ನಾನು ಆ ಬ್ರಾಹ್ಮಣರ ಸೊಕ್ಕನ್ನು ಸೈರಿಸಲಾರೆ. ಆ ರಾಮನ ಪ್ರತಿಜ್ಞೆಯ ಆಡಂಬರವನ್ನು ಕೇಳಲಾರೆ.

ನಾರದ :—

ಹೈಹಯನೇ! ಹೋಗಿಬರುವೆನು. ಅಪ್ಪಣೆಕೊಡು. ನಿನಗೂ ರಾಮನಿಗೂ ಯುದ್ಧವಾದರೆ ಅದರ ಪರಿಣಾಮವು ಅತಿಭಯಂಕರ.

ಕಾರ್ತ್ಯವೀರ್ಯ :—

ಆಗಲಿ ಹೊರಡಿ. ಈ ಭೂಮಿಯಲ್ಲಿ ಕಾರ್ತ್ಯವೀರ್ಯನೋ ರಾಮನೋ, ಇಬ್ಬರಲ್ಲೊಬ್ಬರು ಜೀವಿಸಿರಬೇಕು.

ನಾರದ :—

ಹೌದು! ಅದನ್ನೇ ಲೋಕವೂ ಹಾರೈಸುತ್ತದೆ.

---

# ವಿಷ್ಕಂಭ

---

ಕಾರ್ತ್ಯವೀರ್ಯನು ರಕ್ತವಸ್ತ್ರಗಳನ್ನು ತೊಟ್ಟು, ರಕ್ತಚಂದನವನ್ನು ಧರಿಸಿ, ರಕ್ತಮಾಲ್ಯಾಲಂಕೃತನಾಗಿ ಮಹಾಧನುಸ್ಸನ್ನು ಹಿಡಿದು ಭಯಂಕರಾಕಾರನಾಗಿ ಅಂತಃಪುರದಿಂದ ಹೊರ ಹೊರಡುವನು.

ರಾಣಿ :—

ಮಹಾರಾಜರಿಗೆ ವಿಜಯವಾಗಲಿ! ಇದೇನು ಭಯಂಕರವೇಷ? ಎತ್ತಕಡೆಗೆ ವಿಜಯಯಾತ್ರೆ ?

ಕಾರ್ತ್ಯವೀರ್ಯ :—

ಮಹಾರಾಣಿಯೇ! ತಪೋವನಗಳ ಮೇಲೆ.

ರಾಣಿ :—

ಧರ್ಮರಕ್ಷಕನಾದ ನೀನು ತಪೋವನಗಳಿಗೆ ವಿನೀತವೇಷ ಭೂಷಣಗಳಿಂದ ಹೋಗುವುದು ಉಚಿತವಲ್ಲವೆ ?

ಕಾರ್ತ್ಯವೀರ್ಯ :—

ತಪಸ್ವಿಗಳು ವಿನೀತರಾಗಿಲ್ಲ. ಅವರು ನನ್ನ ಚಕ್ರವರ್ತಿತ್ವವನ್ನೇ ಅಲ್ಲಗಳೆಯುತ್ತಾರೆ.

ರಾಣಿ :—

ಅದಕ್ಕಾಗಿ ತಪಸ್ವಿಗಳ ಮೇಲೆ ಯುದ್ಧಮಾಡುವಿರಾ ? ಪೂಜನೀಯರಾದ ಮಹರ್ಷಿಗಳ ಮೇಲೆ ಅಸ್ತ್ರವನ್ನೆತ್ತುವಿರಾ ?

ಕಾರ್ತ್ಯವೀರ್ಯ :—

ಅವರು ತಪಸ್ವಿಗಳೆಂದು ಯುದ್ಧಮಾಡುವುದಿಲ್ಲ. ಪೂಜನೀಯರೆಂದು ಶಸ್ತ್ರಾಸ್ತ್ರಗಳನ್ನು ಪ್ರಯೋಗಮಾಡುವುದಿಲ್ಲ ಅವರು ರಾಜಪ್ರಜೆಗಳ ಮರ್ಯಾದೆಯನ್ನು ಅತಿಕ್ರಮಿಸಿದ್ದಾರೆಂದು ಅವರಿಗೆ ಶಿಕ್ಷೆಯನ್ನು ವಿಧಿಸಬೇಕಾಗಿದೆ.

ರಾಣಿ :—

ಮಹಾರಾಜನೇ ! ನೀನು ಧರ್ಮಬದ್ಧನಾದರೆ ಅವರು ನಿನ್ನ ರಾಜತ್ವಕ್ಕೆ ತಲೆಬಾಗಿಸುವರು.

ಕಾರ್ತ್ಯವೀರ್ಯ :—

ನಾನು ಯಾವುದಕ್ಕೂ ಬದ್ಧನಲ್ಲ. ನಾನು ಸರ್ವತಂತ್ರ ಸ್ವತಂತ್ರನು ! ಧರ್ಮದ ನಿಯಾಮಕನು ನಾನು. ಧರ್ಮರಕ್ಷಕನು ನಾನು. ಬೇಡವೆಂದು ತೋರಿದಾಗ ಅದನ್ನು ಕಿತ್ತೊಗೆಯುವವನು ನಾನು

ರಾಣಿ :—

ನೀನು ತಪಸ್ವಿಗಳ ಮೇಲೆ ಯುದ್ಧಮಾಡಿದರೆ ನಾವು ಅನಾಥೆಯರಾಗುವೆವು

ಕಾರ್ತ್ಯವೀರ್ಯ :—

ನನ್ನ ಚಕ್ರವರ್ತಿತ್ವ! ಅದೇ ನನ್ನ ಮಹತ್ವದವಿ! ಅದಕ್ಕೆ ಕುಂದಕವಾದರೆ ನಾನು ಬದುಕಿದ್ದರೂ ವ್ಯರ್ಥ! ನಾನು ಸಾರ್ವಭೌಮನಲ್ಲದಿದ್ದರೆ, ನನ್ನಆಜ್ಞೆಯು ಅಪ್ರತಿಹತವಾಗಿ ನಡೆಯದಿದ್ದರೆ, ನನ್ನಸುಖ ನನ್ನಭೋಗ, ನನ್ನ ಭಾಗ್ಯ, ಇವೆಲ್ಲವೂ ನನಗೆ ಸೊಗಸಲ್ಲ. ನನ್ನ ಚಕ್ರವರ್ತಿ ಪದವಿಯೇ ನನ್ನ ಸರ್ವಸ್ವ !

ರಾಣಿ :—

ನೀನೇ ನಮ್ಮಸರ್ವಸ್ವ! ನಮ್ಮಗತಿ ಏನು? ನಾನೇನು ಮಾಡಲಿ?

ಕಾರ್ತ್ಯವೀರ್ಯ :—

ನಾನೇನು ಮಾಡಲಿ!

---

## ಚತುರ್ಥ ದೃಶ್ಯ

---

(ಹಿಮವತ್ಪ್ರಾಂತದಲ್ಲಿ ಗಂಗಾತೀರದಲ್ಲಿ ಕಶ್ಯಪ ಮಹರ್ಷಿಯ ಆಶ್ರಮ)

ಮಹರ್ಷಿಗಳೆಲ್ಲಾ ಬಂದು ಸೇರಿಧ್ದಾರೆ.

ಕಶ್ಯಪ ಮಹರ್ಷಿಯು ಯಜ್ಞದೀಕ್ಷಿತನಾಗಿ ಮಹಾಸತ್ರಕ್ಕೆ ಸಂಕಲ್ಪಮಾಡಿಧ್ದಾನೆ.

ಭಾರ್ಗವ ರಾಮನು ಮಹಾಧನುಸ್ಸನ್ನು ಧರಿಸಿ ಯಜ್ಞರಕ್ಷಕನಾಗಿ ನಿಂತಿಧ್ದಾನೆ.

ಭೀಷಣಾಕಾರನಾದ ಕಾರ್ತ್ಯವೀರ್ಯನು ಯಜ್ಞಭೂಮಿಯನ್ನು ಪ್ರವೇಶಿಸುತ್ತಾನೆ.

ಕಾರ್ತ್ಯವೀರ್ಯನು ಯಜ್ಞಮಂಟಪವನ್ನು ಪ್ರವೇಶಿಸಿ ಕಶ್ಯಪ ಮಹರ್ಷಿಯ ಮುಂದೆ ಬಂದು.

ಮಹರ್ಷಿಯೇ! ತ್ರಿಲೋಕ ವಿಜಯಿಯಾದ ಕಾರ್ತ್ಯವೀರ್ಯನು ಅಭಿವಂದಿಸುವನು.

ಕಶ್ಯಪ :—

ಹೈಹಯಾಧಿಪನೇ! ಶ್ರೇಯೋಸ್ತು!

ಆಸನವನ್ನಲಂಕರಿಸು. ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸು.

ಕಾರ್ತ್ಯವೀರ್ಯ !

ಮಹರ್ಷಿಯೇ ! ನೀನು ಯಜ್ಞವನ್ನಾರಂಭಿಸಿರುವೆಯೆಂದು ಕೇಳಿದೆ. ಎರಡು ಅಪೇಕ್ಷೆಗಳಿಂದ ಬಂದಿದ್ದೇನೆ. ಸಮಯವು ಸರಿಯಾಗಿದೆ.

ಕಶ್ಯಪ : —

ನಿನ್ನ ಅಭೀಷ್ಟಗಳಾವುವು ?

ಕಾರ್ತ್ಯವೀರ್ಯ : —

ಮಹರ್ಷಿಯೇ ! ಈ ಯಜ್ಞದಲ್ಲಿ ನನಗೆ ಹವಿರ್ಭಾಗವನ್ನು ಕೊಡಬೇಕು.

ಈ ಮಹಾಸತ್ರದಲ್ಲಿ ನನಗೇ ಅಗ್ರಪೂಜೆಯನ್ನು ಮಾಡಬೇಕು.

ಕಶ್ಯಪ :—

ಕಾರ್ತ್ಯವೀರ್ಯನೇ ! ನೀನು ಈ ಬ್ರಹ್ಮವೃಂದದಲ್ಲಿ, ಈ ತಪಸ್ವಿ ಕುಲದಲ್ಲಿ, ಈ ಸಾಹಸವನ್ನು ಹೇಗೆ ಮಾಡಿದೆ?

ಕಾರ್ತ್ಯವೀರ್ಯ :—

ಮಹರ್ಷಿಯೇ! ಸಾಹಸವೇನು? ಅದು ನನ್ನ ಅಧಿಕಾರ ನಾನು ದೇವತೆಗಳನ್ನೆಲ್ಲಾ ಯುದ್ಧದಲ್ಲಿ ಜಯಿಸಿದ್ದೇನೆ. ಆದ್ದರಿಂದ ನನಗೆ ಮೊದಲು ಹವಿರ್ಭಾಗವನ್ನು ಕೊಡಬೇಕು. ನಾನು ಈ ಭೂಮಂಡಲದ ಚಕ್ರವರ್ತಿ. ಆದ್ದರಿಂದ ಅಗ್ರಪೂಜೆಯು ನನಗೆ ಸಲ್ಲತಕ್ಕದ್ದು.

ಕಶ್ಯಪ :—

ದೇವತೆಗಳ ಅಧಿಕಾರದಿಂದ ನಾವು ಅವರಿಗೆ ಹವಿರ್ಭಾಗ ಕೊಡುವುದಿಲ್ಲ. ವೇದದ ಅಧಿಕಾರದಿಂದ ಅವರಿಗೆ ಹವಿರ್ಭಾಗವು ಸಲ್ಲುತ್ತದೆ.

ಭೋಗಲಾಲಸೆಯಲ್ಲಿ ಮುಳುಗಿರುವ ರಾಜರಿಗೆ ಇಲ್ಲಿ ಅಗ್ರಪೂಜೆ ಇಲ್ಲ! ಅದು ಯಜ್ಞರಕ್ಷಕರಿಗೆ ಸಲ್ಲತಕ್ಕದ್ದು.

ಕಾರ್ತ್ಯವೀರ್ಯ :—

ನನಗೆ ಹವಿರ್ಭಾಗವನ್ನು ಕೊಡದ ಯಜ್ಞದಲ್ಲಿ ದೇವತೆಗಳು ಬಂದು ಹೇಗೆ ಧೈರ್ಯವಾಗಿ ಹವಿರ್ಭಾಗಗಳನ್ನು ತೆಗೆದುಕೊಳ್ಳುತ್ತಾರೆ?

ಅವರು ನನ್ನನ್ನು ಕಂಡರೆ ಭಯದಿಂದ ಓಡುತ್ತಾರೆ

ಆಗ—, ಆಗ—,

ನಿಮ್ಮ ಯಜ್ಞವೆಲ್ಲಿ? ಹವಿರ್ಭಾಗವಾರಿಗೆ? ಸ್ವೀಕರಿಸುವವರಾರು?

ಕಶ್ಯಪ :—

ದೇವತೆಗಳನ್ನು ಇಲ್ಲಿ ನಾವು ಯುದ್ಧಕ್ಕೆ ಕರೆಯುವುದಿಲ್ಲ, ಅವರನ್ನು ನಾವು ಪೂಜಿಸುವುದಕ್ಕಾಗಿ ಕರೆಯುತ್ತೇವೆ ಅವರನ್ನು ಇಲ್ಲಿಗೆ ಬರಮಾಡಿ ಪೂಜೆಮಾಡುವುದನ್ನು ನಾವು ಬಲ್ಲೆವು. ನಿನಗೆ ದೇವತೆಗಳು ಭಯಪಡಬಹುದು. ನಾವು ಭಯಪಡುವವರಲ್ಲ!

ಕಾರ್ತ್ಯವೀರ್ಯ :—

ನಿಮ್ಮ ಯಜ್ಞರಕ್ಷಕರಾರು?

ಕಶ್ಯಪ :—

ಭಾರ್ಗವ ರಾಮನು.

ಕಾರ್ತ್ಯವೀರ್ಯ :—

ರಾಮನಿಗೆ ಇಲ್ಲಿ ಅಗ್ರಪೂಜೆಯೋ?

ಕಶ್ಯಪ :—

ಇಲ್ಲಿ ರಾಮನಿಗೇ ಅಗ್ರಪೂಜೆ !

ಕಾರ್ತ್ಯವೀರ್ಯ :—

ಈ ಯಜ್ಞದಲ್ಲಿ ಹವಿಭಾಗ! ಅಗ್ರಪೂಜೆ, ಅಥವಾ ಯುದ್ಧ!

ಯಾವುದಾದರೂ ನನಗೆ ಇಷ್ಟವೇ.

ಯಜ್ಞಶಾಲೆಯ ಮಹಾದ್ವಾರದಲ್ಲಿ ರಾಮನು ಧನುಷ್ಟಂಕಾರ ಮಾಡುವನು.

ಬ್ರಾಹ್ಮಣರು :—

ಮಹಾರಾಜನೇ ಇದು ಯಜ್ಞಭೂಮಿ !

ಅದೋ ! ಅಲ್ಲಿ ಯುದ್ಧಕ್ಷೇತ್ರ, ಅಲ್ಲಿಗೆ ಹೋಗು. ನಿನ್ನನ್ನು ಆ ಧನುಷ್ಟಂಕಾರವು ಕರೆಯುತ್ತಿದೆ.

ಶೂರನಾದರೆ ಹೋಗಿ ರಾಮನ ಮುಂದೆ ನಿಂತು ಯುದ್ಧಮಾಡು!

ಕಾರ್ತ್ಯವೀರ್ಯ :—

ಬ್ರಾಹ್ಮಣರೇ ! ಇಂದು ನನಗೆ ಯುದ್ಧಕ್ಕಿಂತ ಪ್ರಿಯವಾದುದು ಮತ್ತಾವುದೂ ಇಲ್ಲ !

[ಎಂದು ಹೇಳಿ ಹಾರಿಹೋಗಿ ಅಟ್ಟಹಾಸದಿಂದ ರಾಮನ ಮುಂದೆ ನಿಲ್ಲುವನು]

ಕಾರ್ತ್ಯವೀರ್ಯ :—

ರಾಮಾ ! ಈಗ ನೀನು ನನ್ನ ಕೈಗೆ ಸಿಕ್ಕಿದೆ ! ನಿನ್ನ ಆಯುಷ್ಯವು ಇಂದಿಗೆ ಮುಗಿಯಿತು !

ಭಾರ್ಗವ :—

ಕೈಹಯನೇ! ನಿಲ್ಲು! ಓಡಿ ಹೋಗಬೇಡ! ನೀನು ಅಂದು ನಮ್ಮ ಆಶ್ರಮಕ್ಕೆ ಬಂದಿದ್ದೆ. ಕಿರಾತನಂತೆ ಸ್ವರ್ಣಧೇನುವನ್ನು ಹಿಂಸೆ ಮಾಡಿದೆ. ರಾಕ್ಷಸನಂತೆ ತಪಸ್ವಿಗಳನ್ನು ಭಯಪಡಿಸಿದೆ. ಕಳ್ಳನ ಹಾಗೆ ಓಡಿಹೋದೆ. ಅಂದು ನನ್ನ ಎದುರಿಗೆ ನೀನು ನಿಂತಿದ್ದರೆ ನಿನ್ನ ಅವತಾರವು ಆಗಲೇ ಪೂರ್ತಿಯಾಗುತ್ತಿತ್ತು. ಅದು ಈಗ ಸಂನ್ನಿಹಿತವಾಗಿದೆ

ಕಾರ್ತ್ಯವೀರ್ಯ :—

ರಾಮನೇ! ಇಲ್ಲಿ ನಿನಗೆ ಅಗ್ರಪೂಜೆಯೋ? ನೀನು ಯಜ್ಞ ರಕ್ಷಕನೋ?

ರಾಮ :—

ಧರ್ಮದ್ರೋಹಿಯಾದ ನಿನಗೆ ಅಗ್ರಪೂಜೆಯು ಬೇಕೋ? ಭೋಗಪರಾಯಣನಾದ ನೀನು ಹವಿರ್ಭಾಗಕ್ಕೆ ಆಶೆಪಟ್ಟೆಯೋ?

ಕಾರ್ತ್ಯವೀರ್ಯ :—

ಮಾತೃವಧೆ ಮಾಡಿದ ನಿನಗೆ ಧರ್ಮಾಧರ್ಮಗಳ ಮಾತೇಕೆ? ಮಾತೃಘಾತುಕನಾದ ಪಾಪಿಯೇ! ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ನಿನಗೆ ಶಸ್ತ್ರವನ್ನು ಹಿಡಿವ ಅಧಿಕಾರವೆಲ್ಲಿದೆ? ಹುಟ್ಟಿದ್ದು ಬ್ರಾಹ್ಮಣ ಕುಲ. ವೃತ್ತಿಯು ಕಿರಾತವೃತ್ತಿ!

ರಾಮ :—

ಬ್ರಾಹ್ಮಣರು ಶಸ್ತ್ರವನ್ನು ಹಿಡಿಯುವುದು ನೀವು ಭೋಗದಲ್ಲಿ ಮುಳುಗಿದಾಗ, ಕ್ಷತ್ರಿಯರು ಉನ್ಮತ್ತರಾದಾಗ, ಲೋಕದಲ್ಲಿ ಧರ್ಮಕ್ಕೆ ಗ್ಲಾನಿಯಾವರಿಸಿದಾಗ, ಅಧರ್ಮದ ಅಭ್ಯುದಯವಾದಾಗ!

ಕಾರ್ತ್ಯವೀರ್ಯ :—

ರಾಮನೇ! ಧರ್ಮ, ಅಧರ್ಮಗಳ ಗೊಡ್ಡುವಾದಕ್ಕೆ ನಾನು ಬಂದಿಲ್ಲ. ನಾನು ಬಂದಿರುವುದು ಯುದ್ಧಕ್ಕೆ. ನಿಲ್ಲು!

(ಇಬ್ಬರಿಗೂ ತುಮುಲ ಯುದ್ಧವಾಗುವುದು.)

ಕಾರ್ತ್ಯವೀರ್ಯ :—

ರಾಮನೇ! ನೀನು ವೀರನೇ ಹೌದು. ಬಲು ಪರಾಕ್ರಮದಿಂದ ಯುದ್ಧಮಾಡಿದೆ. ಇಂದಿನವರೆಗೆ ಯಾವ ವೀರನೂ ನನ್ನೊಡನೆ ಹೀಗೆ ಸರಿನಿಂತು ಯುದ್ಧಮಾಡಿದವನೇ ಇಲ್ಲ! ನಾನು ನಿನ್ನ ಸಾಹಸಕ್ಕೆ ಮೆಚ್ಚಿದೆ. ನೀನು ಬ್ರಾಹ್ಮಣ. ನಿನ್ನೊಡನೆ ಯುದ್ಧವೇಕೆ? ಓಡಿಹೋಗು. ನಿನ್ನನ್ನು ಕರುಣೆಯಿಂದ ಬಿಟ್ಟುಬಿಡುವೆನು.

ರಾಮ :—

ಕಾರ್ತ್ಯವೀರ್ಯನೇ! ನಿನ್ನ ಕರುಣೆಯನ್ನು ಕೋರುವ ಕುನ್ನಿಯು ನಾನಲ್ಲ. ಈಗಲೇ ನಿನ್ನ ಪ್ರಾಣಗಳನ್ನು ನನ್ನ ಬಾಣಗಳು ಹೀರುತ್ತವೆ.

ಕಾರ್ತ್ಯವೀರ್ಯ :—

ನೀನು ನನ್ನ ಪ್ರಾಣಗಳನ್ನು ಹೀರುವೆಯಾ? ನೀನು ಬ್ರಾಹ್ಮಣರ ಮುಂದೆ ಬಲು ಜಂಭಕೊಚ್ಚಿಕೊಂಡಿರುವೆಯಂತೆ! ಸಾಹಸದ ಪ್ರತಿಜ್ಞೆಯನ್ನು ಮಾಡಿರುವೆಯಂತೆ! ಸಹಸ್ರಬಾಹು ಕಾರ್ತ್ಯವೀರ್ಯನನ್ನು ಸಂಹರಿಸುವುದಾಗಿ ನಿನ್ನ ಮಹಾಪ್ರತಿಜ್ಞೆಯಂತೆ!

ರಾಮ :—

ಹೈಹಯನೇ! ಪ್ರತಿಜ್ಞೆಯು ಇನ್ನೊಂದು ಕ್ಷಣದಲ್ಲಿ ಪೂರ್ಣವಾಗುವುದು.

ಕಾರ್ತ್ಯವೀರ್ಯ :—

ನನ್ನನ್ನು ಕೊಲ್ಲುವೆಯಾ? ನಿನ್ನ ಭುಜದಲ್ಲಿ ಅಂತಹ ಬಲ ವಿರುವುದೇ? ನಿನ್ನ ಬಾಣಗಳಲ್ಲಿ ಅಷ್ಟು ಶಕ್ತಿಯಿರುವುದೇ!

ರಾಮ :—

ಕಾರ್ತ್ಯವೀರ್ಯನೇ! ಕೊಲ್ಲುವೆನು ನಿನ್ನನ್ನು! ನಿನ್ನನ್ನು ಮಾತ್ರವಲ್ಲ! ನಿನ್ನ ಕುಲವನ್ನು! ಅಷ್ಟೇ ಅಲ್ಲ ಧರ್ಮದ್ರೋಹಿಗಳಾದ ಕ್ಷತ್ರಿಯರ ಕುಲವೆಲ್ಲವನ್ನೂ ಸಮೂಲವಾಗಿ ನಾಶಮಾಡುವೆನು.

ಕಾರ್ತ್ಯವೀರ್ಯನು ಕ್ರೋಧೋದ್ದೀಪಿತನಾಗಿ ಸಹಸ್ರಬಾಹುಗಳಿಂದ ರಾಮನ ಹೃದಯವನ್ನು ಭೇದಿಸುವಂತಹ ಬಾಣಪ್ರಯೋಗ ಮಾಡುವನು. ರಾಮನು ಒಂದೇ ಬಾಣದಿಂದ ಎಲ್ಲ ಬಾಣಗಳನ್ನು ಕತ್ತರಿಸಿ ಕಾರ್ತ್ಯವೀರ್ಯನಮೇಲೆ ಅಸ್ತ್ರಪ್ರಯೋಗಮಾಡುವನು.

ಬಾಣವು ಕಾರ್ತ್ಯವೀರ್ಯನ ಹೃದಯವನ್ನು ಭೇದಿಸುವುದು.

ಕಾರ್ತ್ಯವೀರ್ಯನು ಭಯಂಕರನಾದಮಾಡುತ್ತಾ ಭೂಮಿಯಲ್ಲಿ ಬೀಳುವನು.

ಕಾರ್ತ್ಯವೀರ್ಯ :—

ರಾಮನೇ! ನೀನು ಶೂರನಹುದು. ಧನುರ್ಧಾರಿಗಳಲ್ಲಿ ಶ್ರೇಷ್ಠನಹುದು. ಕಾರ್ತ್ಯವೀರ್ಯನನ್ನು ಸಂಹರಿಸಿದ ಮಹಾ ಪ್ರತಾಪಶಾಲಿಯಹುದು. ನಾನು ಮೃತನಾದೆ. ನಿನ್ನ ಪ್ರತಿಜ್ಞೆಯು ಜಯಿಸಿತು. ಈ ಯುದ್ಧದಲ್ಲಿ ನೀನು ನನ್ನನ್ನು ಗೆದ್ದೆ. ಆದರೆ ಈ ನನ್ನ ಅಖಂಡ ಸಾಮ್ರಾಜ್ಯಕ್ಕೆ ಚ್ಯುತಿಯಿಲ್ಲ. ಅದನ್ನು ನೀನು ಜಯಿಸಲಿಲ್ಲ. ಅದು ನಿನ್ನದಾಗುವುದಿಲ್ಲ.

ಅದು ಕ್ಷತ್ರಿಯರದು.

ನನ್ನ ಪುತ್ರರು, ನನ್ನ ಕುಲದವರು, ಚಕ್ರವರ್ತಿಗಳು! ಅದು ನನ್ನ ಸಾಮ್ರಾಜ್ಯ! ಅದು ಶಾಶ್ವತ!!

# ವಿಷ್ಕಂಭ.

---

ವನವಾಸಿಗಳು :—

ಆಹಾ! ಭೂಲೋಕದಲ್ಲಿ ಎಷ್ಟು ಆಘಾತ ಪ್ರಘಾತಗಳು!

ಸ್ವರ್ಣಧೇನುವಿನ ಆಶೆ! ಕಾರ್ತ್ಯವೀರ್ಯನ ಅಭಿಭವ! ಪೂಜ್ಯ ಪೂಜಾವ್ಯತಿಕ್ರಮ! ಭಾರ್ಗವನ ಪ್ರತಿಜ್ಞೆ! ಕಶ್ಯಪನ ಮಹಾಸತ್ವ! ಕಾರ್ತ್ಯವೀರ್ಯನ ಉನ್ಮತ್ತಕೃತ್ಯ, ಸಂಹಾರ! ಎಷ್ಟು ಅಘಟನಘಟನಾವಳಿಗಳು! ಭಾರ್ಗವನು ಪ್ರತಿಜ್ಞೆಯನ್ನೇನೋ ಪೂರ್ಣಮಾಡಿದನು. ಕಾರ್ತ್ಯವೀರ್ಯನ ಸಂಹಾರದಿಂದ ಲೋಕದಲ್ಲಿ ಕ್ಷೇಮವಾಗಲಿಲ್ಲ. ಅದರಿಂದ ಕ್ಷೋಭವೆದ್ದಿತು. ಹೈಹಯರು ಪಿತೃವಧೆಯಿಂದ ಕ್ರೋಧಾವಿಷ್ಟರಾಗಿ ಲೋಕಕಂಟಕರಾದರು.

ಶಿವ! ಶಿವಾ! ಆ ಹೈಹಯರು ತಪಸ್ಸಾಮ್ರಾಜ್ಯಚಕ್ರವರ್ತಿಯಾದ ಭೃಗುಮಹರ್ಷಿಯ ಶಿರಶ್ಛೇದ ಮಾಡಿಬಿಟ್ಟರು. ಭಾರ್ಗವನು ರೋಷ, ಕ್ರೋಧಗಳಿಂದ ಜ್ವಲಿಸುತ್ತಿದ್ದಾನೆ. ಅವನ ಬಾಣಗಳು ದಾವಾನಲನಂತೆ ಲೋಕವನ್ನು ಸುಡುತ್ತಿವೆ. ಆ ಮಹಾಜ್ವಾಲೆಯಲ್ಲಿ ಕ್ಷತ್ರಕುಲವು ಪತಂಗಗಳಂತೆ ಬೀಳುತ್ತಿದೆ.

ಈ ಉನ್ಮತ್ತ ಭಾರ್ಗವನನ್ನು ಶಾಂತಗೊಳಿಸುವವರಾರು? ಎಲ್ಲೆಲ್ಲಿ ನೋಡಿದರೂ, ಶಾಂತಿ ಇಲ್ಲ. ಸುಖವಿಲ್ಲ. ಈ ಪ್ರಪಂಚವು ಉಳಿಯುವುದೋ, ಈ ಕಾಲರುದ್ರನ ವಿಕಟಾಟ್ಟಹಾಸದಲ್ಲಿ ಬೆಂದು ಭಸ್ಮವಾಗಿ ಹೋಗುವುದೋ!

---

# ಪಂಚಮದೃಶ್ಯ

---

ಕಶ್ಯಪ ಮಹರ್ಷಿಯು ಆಹ್ನಿಕವನ್ನು ಪೂರ್ತಿಗೈದು ಲೋಕಾನುಗ್ರಹವನ್ನು ಆಶಿಸಿರುವನು.

ಋಷಿಗಳು ಬಂದು ನಮಸ್ಕರಿಸುವರು.

ಕಶ್ಯಪ :—

ವಿಪ್ರೋತ್ತಮರೇ! ಸಮಸ್ತ ಲೋಕಗಳೂ ಸುಖವಾಗಿರುವುವೇ? ನಿಮ್ಮಗಳ ತಪಸ್ಸು ನಿರ್ವಿಘ್ನವಾಗಿರುವುದೇ ?

ಋಷಿಗಳು :—

ಲೋಕವು ಕ್ಷೋಭೆಗೊಂಡಿರುವುದು. ಸುಖವೆಲ್ಲಿದೆ? ತಪೋವನಗಳಲ್ಲಿ ತಪಸ್ಸು ಇಲ್ಲ. ಲೋಕದಲ್ಲಿ ಕ್ಷೇಮವೂ ಇಲ್ಲ. ಪ್ರಳಯಾಗ್ನಿ ಎದ್ದಿದೆ. ಭಯ, ಕ್ರೋಧ, ದ್ವೇಷ, ಅಂಧಕಾರ, ಹಿಂಸೆಗಳಲ್ಲಿ ಲೋಕವು ಮುಳುಗಿ ಹೋಗಿದೆ.

ಕಶ್ಯಪ :—

ಲೋಕವಲ್ಲಿ ಇಷ್ಟು ಸಂಕಟವು ಯಾರಿಂದ ? ಯಾರಿಂದ ಇಷ್ಟು ಪ್ರಳಯ ? ರಕ್ಷಕರಿಲ್ಲವೆ ?

ಋಷಿಗಳು :—

ಮಹರ್ಷಿಯೇ ನಿನ್ನ ಜ್ಞಾನದೃಷ್ಟಿಗೆ ಅಗೋಚರವಾದುದಾವುದು? ನಿನ್ನ ಮಹಾಸತ್ರದಲ್ಲಿ ಕಾರ್ತ್ಯವೀರ್ಯನ ಸಂಹಾರದಿಂದ

ಆರಂಭವಾದ ರಾಮನ ಕ್ರೋಧವು ಇನ್ನೂ ಶಮನವಾಗಿಲ್ಲ. ಭೃಗು ಮಹರ್ಷಿಯ ವಧೆಯಿಂದಂತೂ ಉರಿಯುವ ಯಜ್ಞೇಶ್ವರನಿಗೆ ಆಜ್ಯಾಹುತಿ ಮಾಡಿದಂತಾಗಿದೆ. ಆ ಭೈರವತಾಂಡವವು ಲೋಕವನ್ನು ಕಬಳಿಸುತ್ತಿದೆ.

ರಾಮನು ಅವಿಶ್ರಾಂತವಾಗಿ ಕ್ಷತ್ರಿಯರನ್ನು ಸಂಹಾರ ಮಾಡುತ್ತಿದ್ದಾನೆ. ಅವರಲ್ಲಿ ಧರ್ಮಕಂಟಕರೂ, ಧರ್ಮರಕ್ಷಕರೂ, ಎಲ್ಲರೂ ಆಹುತಿಯಾಗಿ ಹೋದರು. ರಾಮನು ಉನ್ಮತ್ತನಾಗಿದ್ದಾನೆ. ಆ ಕ್ಷತ್ರಕುಲ ಸಂಹಾರ ರುದ್ರನ ಆವೇಶದಲ್ಲಿ, ಲೋಕದ ಹಿತಾಹಿತಗಳ ಲಕ್ಷ್ಯವೇ ಇಲ್ಲ. ಕ್ಷತ್ರಿಯ ಕುಲದ ಮೊಳಕೆಗಳು ಕೂಡಾ ಉಳಿಯುವಂತಿಲ್ಲ.

ಮಹರ್ಷಿಯೇ ! ಲೋಕವನ್ನು ಅನುಗ್ರಹಿಸು. ಧನುಸ್ಸನ್ನು ಒಗೆದು ರಾಮನು ತಪಸ್ಸಿಗೆ ತೆರಳಿದಲ್ಲದೆ ಲೋಕಕ್ಕೆ ಕ್ಷೇಮವಿಲ್ಲ. ಆ ಭಾರ್ಗವನನ್ನು ಲೋಕಸಂಹಾರದಿಂದ ಹಿಂತಿರುಗಿಸುವ ಶಕ್ತಿಯು ನಿನಗಲ್ಲದೇ ಮತ್ತಾರಿಗೂ ಇಲ್ಲ. ಈಗ ಹರಿಹರ ಬ್ರಹ್ಮರು ಬಂದರೂ ರಾಮನನ್ನು ದಮನಮಾಡಲಾರರು. ನೀನು ಈ ಪ್ರಳಯವನ್ನು ತಡೆಯಬಲ್ಲೆ. ನಿನ್ನಲ್ಲಿ ಅಂಥಾ ತಪಶ್ಶಕ್ತಿ ಇರುವುದು. ನಿನ್ನಿಂದ ಲೋಕದ ಉದ್ಧಾರವಾಗಬೇಕು. ಇಲ್ಲವೇ ನಾಶವು ಸಿದ್ಧ ! ಲೋಕವನ್ನು ಕರುಣಿಸು.

ಕಶ್ಯಪ :—

ವಿಪ್ರರಿರಾ! ರಾಮನ ಕ್ರೋಧದಿಂದ ಈ ದಾವಾನಲವು ಎದ್ದಿಲ್ಲ. ರಾಮಬಾಣದಿಂದ ಪ್ರಳಯವಾಗುವುದಿಲ್ಲ. ಬ್ರಹ್ಮನಿಷ್ಠನಾದ ಭೃಗು ಮಹರ್ಷಿಯ ಘೋರವಧೆ! ಅದರಿಂದ ಈ ಪ್ರಳಯದ ಕರಾಳ ರೂಪವು ಎದ್ದಿದೆ. ಆ ಬ್ರಹ್ಮಹತ್ಯೆಯು ಲೋಕವನ್ನು ಕಬಳಿಸುತ್ತಿದೆ.

ಭಾರ್ಗವನು ನಿಮಿತ್ತ ಮಾತ್ರ! ರಾಮನನ್ನು ನಾನು ತಡೆಯಬಲ್ಲೆ. ಆದರೆ ಆ ಬ್ರಹ್ಮಹತ್ಯೆಯ ಪಾಪವನ್ನು ಶಮನ ಮಾಡುವ ಶಕ್ತಿಯು ಈ ಬ್ರಹ್ಮಾಂಡದಲ್ಲಿ ಯಾರಿಗೂ ಇಲ್ಲ. ಆ ಘೋರಕೃತ್ಯದ ಫಲವನ್ನು ಕಲ್ಪಾಂತದವರೆಗೆ ಈ ಲೋಕವು ಅನುಭವಿಸಲೇ ಬೇಕು.

ಋಷಿಗಳಿರಾ ! ನೀವು ಆಶ್ರಮಗಳಿಗೆ ತೆರಳಿರಿ ಲೋಕಕ್ಷೇಮಾರ್ಥವಾಗಿ ತಪಸ್ಸನ್ನಾಚರಿಸಿರಿ. ನಾನು ರಾಮನನ್ನು ಸಮಾಧಾನಮಾಡಿ ಕ್ಷತ್ರಕ್ಷಯವನ್ನು ನಿಲ್ಲಿಸಿ ತಪಸ್ಸಿಗೆ ಕಳುಹುವೆನು.

ಲೋಕ ಕಲ್ಯಾಣವಾಗಲಿ.

[ಕಶ್ಯಪನು ರಾಮನನ್ನು ಹುಡುಕಿಕೊಂಡು ಹೊರಡುವನು.

ಭಾರ್ಗವನು ವ್ಯಾಘ್ರಚರ್ಮವನ್ನು ಧರಿಸಿ, ಹೆದೆಯೇರಿಸಿದ ಧನುಸ್ಸನ್ನು ಕೈಯಲ್ಲಿ ಹಿಡಿದು, ಕಣ್ಣುಗಳಿಂದ ಕ್ರೋಧಾನಲವನು ಕಾರುತ್ತಾ, ಭೂಮಿಯು ಅದರುವಂತೆ ನಡೆಯುತ್ತಾ, ಉನ್ಮತ್ತವೇಷದಿಂದ ವೇಗವಾಗಿ ಹೋಗುತ್ತಿರುವನು.

ಕಶ್ಯಪ ಮಹರ್ಷಿಯು ಎದುರಿಗೆ ಹೋಗಿ ಅಡ್ಡಲಾಗಿ ನಿಲ್ಲುವನು]

ರಾಮ :—

ಯಾರು ನನ್ನ ಗತಿಯನ್ನು ತಡೆಯುವರು? (ಎಂದು ಘರ್ಜಿಸುತ್ತಾ ಕಶ್ಯಪನನ್ನು ನೋಡುವನು.)

ಬ್ರಹ್ಮನಿಷ್ಠನಾದ ಮಹರ್ಷಿಯೇ! ಭಾರ್ಗವ ರಾಮನು ಅಭಿವಂದಿಸುವನು.

ಕಶ್ಯಪ:—

ಲೋಕ ರಕ್ಷಕನೇ! ಧರ್ಮೋದ್ಧಾರಕನೇ! ಶಾಂತನಾಗು. ರಾಮನೇ! ಎತ್ತ ಹೋಗುತ್ತಿರುವೆ? ಏನು ಈ ಆವೇಶ? ಈ ಉದ್ವೇಗ?

ರಾಮ :—

ಬ್ರಹ್ಮರ್ಷಿಯೇ! ಈ ಲೋಕದಲ್ಲಿ ಅಧರ್ಮವು ಬೆಳೆದುಹೋಗಿದೆ. ಈ ಪಾಪವನ್ನು ನೋಡಲಾಗುವುದಿಲ್ಲ. ನೋಡಿ ಸಹಿಸಲಾಗುವುದಿಲ್ಲ ಮದೋನ್ಮತ್ತರಾದ ಕ್ಷತ್ರಿಯರು ಲೋಕವನ್ನು ಹಿಂಸೆಮಾಡುತ್ತಾ ತಪಸ್ವಿಗಳನ್ನು ನೋಯಿಸುತ್ತಾ, ಲೋಕ ಕಂಟಕರಾಗಿ ಧರ್ಮ ದ್ರೋಹಿಗಳಾದರು. ಈಗ ದೈವದ್ರೋಹಕ್ಕೆ ಆರಂಭವಾಗಿದೆ ಕ್ಷತ್ರಿಯಕುಲವನ್ನೇ ಸಂಹಾರಮಾಡಿದ್ದೇನೆ. ಎಲ್ಲಿಯೋ, ಆ ಅಯೋಧ್ಯೆಯ ದಶರಥ. ಅವನು ಹೇಡಿಯಂತೆ ಓಡಿಹೋಗಿ ಔತು ಕೊಂಡು ನನ್ನಲ್ಲಿ ಪ್ರಾಣಭಿಕ್ಷೆಯನ್ನು ಪಡೆದವನು. ಅವನ ಮಗ ನೊಬ್ಬ ರಾಮನಂತೆ! ಅವನು ಮೊನ್ನೆತಾನೇ ಮಿಥಿಲಾನಗರಿಯಲ್ಲಿ ಪರಮೇಶನ ಧನುರ್ಭಂಗಮಾಡಿದನಂತೆ! ಕ್ಷತ್ರಿಯರಿಗೆ ಅಂಥಾ ಭುಜಬಲವೆಂದರೆ ಅದು ನನ್ನ ಕ್ರೋಧವನ್ನು ಇಮ್ಮಡಿ ಎಬ್ಬಿಸುತ್ತದೆ. ಪರಮೇಶನ ಧನುರ್ಭಂಗವೆಂದರೆ ಅದು ದೈವದ್ರೋಹವು ಮಾತ್ರ ವಲ್ಲ; ಧನುರ್ಧಾರಿಯಾದ ನನಗೆ ಕಳಂಕ! ನನ್ನ ಕ್ಷಾತ್ರದಮನದ ಮಹಾಪ್ರತಿಜ್ಞೆಗೆ ಭಂಗ! ಇದನ್ನು ನಾನು ಸಹಿಸಲಾರೆ! ಆ ರಾಮನ ಪರಾಕ್ರಮವನ್ನಡಗಿಸಲು ಹೊರಟಿದ್ದೇನೆ.

ಕಶ್ಯಪ :—

ರಾಮನೇ! ಭಾರ್ಗವನೇ! ನಿನ್ನ ಘೋರ ಪ್ರತಿಜ್ಞೆಯಿಂದ ಲೋಕವು ಸಂಕಟದಲ್ಲಿ ಸಿಕ್ಕಿದೆ. ಕ್ಷತ್ರಿಯರು ಧರ್ಮವಿಮುಖರಾಗಿ ಭೋಗದಲ್ಲಿ ಮುಳುಗಿದರೆ, ಅವರ ಹಾನಿಯಾಗುತ್ತದೆ; ನಿನ್ನ ಕ್ರೋಧಾವೇಶದಿಂದ ಪ್ರಪಂಚದ ಹಾನಿಯಾಗುತ್ತಿದೆ. ಲೋಕವಲ್ಲಿ

ಸುಖವಿಲ್ಲ. ಶಾಂತಿಯಿಲ್ಲ. ಪ್ರಳಯವಾಗುತ್ತಿದೆ. ಅದಕ್ಕೆ ನೀನೇ ಕಾರಣನು. ಈಗ ಲೋಕದಲ್ಲಿ ಕಾಣುತ್ತಿರುವ ಹಿಂಸೆಯೆಲ್ಲಾ ನಿನ್ನದು. ನಿನ್ನವರಾದ ನಮ್ಮದು!

ರಾಮ :—

ಮಹರ್ಷಿಯೇ! ನಾನೇನು ಮಾಡಬೇಕು? ಲೋಕದ ಪಾಪವನ್ನು ಅದು ಅನುಭವಿಸಲೇಬೇಕು. ಕಾರ್ತ್ಯವೀರ್ಯನ ಅತ್ಯಾಚಾರಕ್ಕೆ ಕ್ಷತ್ರಕುಲ ಕ್ಷಯವಾಗುತ್ತಿದೆ.

ಕಶ್ಯಪ :—

ಈಗ ಲೋಕದಲ್ಲಿ ತುಂಬಿರುವುದು ಕಾರ್ತ್ಯವೀರ್ಯನ ಅತ್ಯಾಚಾರವಲ್ಲ. ನಿನ್ನ ಕ್ರೋಧವಹ್ನಿ! ನೀನು ಈಗ ಶಸ್ತ್ರಪರಿತ್ಯಾಗಮಾಡು ಲೋಕ ಕಲ್ಯಾಣವಾಗುವುದು.

ರಾಮ :—

ಶಸ್ತ್ರಪರಿತ್ಯಾಗಮಾಡಿದರೆ ನನ್ನ ಕ್ರೋಧವು ಶಮನವಾಗುವ ಬಗೆ ಹೇಗೆ?

ಕಶ್ಯಪ :—

ನಿನ್ನ ಕ್ರೋಧವು ಕ್ಷತ್ರವಧೆಯಿಂದ, ಲೋಕಹಿಂಸೆಯಿಂದ ಶಮನವಾಗುವುದಿಲ್ಲ. ಅದು ಕ್ರೋಧಾಗ್ನಿಗೆ ಅಜ್ಯಾಹುತಿಯಂತೆ!

ನೀನು ತಪಸ್ಸನ್ನಾಚರಿಸಿದರೆ ಕ್ರೋಧ ಶಮನವಾಗುವುದು. ರಾಮಾ! ಈ ಲೋಕದಲ್ಲಿ ಎದ್ದಿರುವ ಹಿಂಸೆ! ಸಂಕಟ! ಇವುಗಳ ದಾರುಣ ಸ್ವರೂಪವು ನಿನ್ನ ಕಣ್ಣಿಗೆ ಕಾಣುತ್ತಿಲ್ಲವೆ? ಅದಕ್ಕೆ ನಿನ್ನ ಘೋರ ಸಂಕಲ್ಪ! ಕ್ಷತ್ರವಧೆಗಳೇ ಕಾರಣ!

ರಾಮ :—

ನನ್ನನ್ನೇನೋ ನೀನು ಶಮನಗೊಳಿಸಬಲ್ಲೆ! ಈ ಲೋಕವನ್ನು ಭೃಗುಮಹರ್ಷಿಯ ವಧೆಯು ಸುಡುತ್ತಿದೆ. ಆದರೆ ಅವರ ಶಾಂತಿಗೆ ನೀನೇನು ಮಾಡುವೆ ?

ಕಶ್ಯಪ :—

ಲೋಕ ಕ್ಷೇಮಾರ್ಥವಾಗಿ ನನ್ನ ತಪಸ್ಸನ್ನೆಲ್ಲಾ ಧಾರೆಯೆರೆಯುವೆನು. ಅದರಿಂದ ಬ್ರಹ್ಮಹತ್ಯಾಪಾಪವು ಶಾಂತವಾಗಲಿ! ಲೋಕ ಕಲ್ಯಾಣವಾಗಲಿ!

ರಾಮ :—

ತಥಾಸ್ತು. ನನಗೆ ಯೇನು ಆಜ್ಞೆ ಮಾಡುವೆ ?

ಕಶ್ಯಪ :—

ನೀನು ಈ ಕ್ರೂರಕರ್ಮದಿಂದ ನಿವೃತ್ತನಾಗಿ ತಪಸ್ಸಿಗೆ ತೆರಳು

ರಾಮ :—

ಈಗ ಭೂಮಿಗೆ ನಾಥರಿಲ್ಲ. ಧರ್ಮಕ್ಕೆ ರಕ್ಷಕರಿಲ್ಲ. ಈಗ ಈ ಭೂಮಿಯು ನನ್ನದು. ಇದನ್ನು ಯಾರಿಗೆ ಒಪ್ಪಿಸಲಿ? ಧರ್ಮ ರಕ್ಷಣೆಯ ಭಾರವನ್ನು ಯಾರಲ್ಲಿ ಇಡಲಿ !

ಕಶ್ಯಪ :

ನನ್ನ ಯಜ್ಞದಲ್ಲಿ ನೀನು ಕ್ಷತ್ರಕ್ಷಯಕ್ಕೆ ಆರಂಭಿಸಿದೆ. ಅದಕ್ಕೆ ಕಾರಣಕರ್ತನು ನಾನು. ಈ ಭೂಮಿಯನ್ನು ನನಗೆ ದಾನಮಾಡು.

ರಾಮ :

ನಾನು ಕ್ಷತ್ರಿಯರನ್ನು ಸಂಹಾರಮಾಡಿ ಈ ಅಖಂಡ ಭೂಮಂಡಲವನ್ನು ಜಯಿಸಿದ್ದೇನೆ. ಈ ಭೂಮಿಯು ನನ್ನ ಕೈಯ್ಯಲ್ಲಿದೆ

ಇದನ್ನು ನಿನಗೆ ದಾನಮಾಡುತ್ತೇನೆ. ನಾನು ಈ ಭೂಮಿಯ ಸ್ಪರ್ಶವಿಲ್ಲದೇ ಸಮುದ್ರ ಮಧ್ಯದಲ್ಲಿ ನಿಂತು ಲೋಕಕ್ಷೇಮಾರ್ಥವಾಗಿ ತಪಸ್ಸನ್ನಾಚರಿಸುವೆನು.

ಕಶ್ಯಪ :—

ರಾಮಾ ಈ ಭೂಮಿಯು ಈಗ ನನ್ನದೋ ?

ರಾಮ :—

ಹೌದು! ಇಂದಿನಿಂದ ಈ ಭೂಮಿಯು ನಿನ್ನದು. ಇನ್ನು ಇದು ಕಾಶ್ಯಪೀ !

ಕಶ್ಯಪ :—

ಹಾಗಾದರೆ ನನ್ನ ಆಜ್ಞೆಯಂತೆ ನೀನು ಈ ಧನುಸ್ಸನ್ನು ತ್ಯಾಗ ಮಾಡು.

ರಾಮ :—

ಮಹರ್ಷಿಯೇ! ಈ ಮಹಾಸತ್ವವನ್ನು ಯಾರು ಧರಿಸುವರು ?

ಕಶ್ಯಪ :—

ಭಾರ್ಗವನೇ! ಶ್ರೀಮನ್ನಾರಾಯಣನು ಧರ್ಮೋದ್ಧಾರಕ್ಕಾಗಿ ದಶರಥರಾಮನಾಗಿ ಅವತರಿಸಿರುವನು. ಅವನು ಲೋಕವನ್ನು ರಕ್ಷಿಸುವನು. ಧರ್ಮವನ್ನುದ್ಧಾರಮಾಡುವನು.

ಈ ಮಹಾವೈಷ್ಣವ ಧನುಸ್ಸನ್ನು ಆ ಶ್ರೀರಾಮನಲ್ಲಿ ಅರ್ಪಿಸಿ, ನೀನು ತಪಸ್ಸಿಗೆ ತೆರಳು

ನಾನೂ ಈ ಭೂಮಿಯನ್ನು ಅವನಿಗೆ ಸಮರ್ಪಿಸಿ ತಪಸ್ಸಿಗೆ ಹೋಗುವೆನು.

( ಇಬ್ಬರೂ ಹೊರಡುವರು )

ಶ್ರೀರಾಮನು ಸೀತಾದೇವಿಯ ವಿವಾದ ಮಾಡಿಕೊಂಡು ಮಿಥಿಲಾನಗರಿಯಿಂದ ಅಯೋಧ್ಯೆಗೆ ಬರುತ್ತಿರುವನು.

ಮಾರ್ಗದಲ್ಲಿ ಭಾರ್ಗವನು ಹೋಗಿ ಎದುರಿಸುವನು.

ವಿಶ್ವಾಮಿತ್ರ :—

ರಾಮನೆ ! ಭಾರ್ಗವನು ನಿನಗೆ ದರ್ಶನವಿತ್ತಿರುವನು. ಈತನಿಗೆ ಅಭಿವಂದಿಸು

ಶ್ರೀರಾಮನು ಭಾರ್ಗವನಿಗೆ ಅಭಿವಂದಿಸುವನು.

ಭಾರ್ಗವ :— ವಿಜಯೀಭವ.

( ಆಶೀರ್ವದಿಸಿದನು. )

ಭಾರ್ಗವ :—

ರಾಮಚಂದ್ರನೆ ! ವಿಶ್ವಾಮಿತ್ರ ಮಹರ್ಷಿಯ ಯಜ್ಞರಕ್ಷಣೆಯನ್ನೂ ಶಿವಧನುರ್ಭಂಗವನ್ನೂ ಕೇಳಿದೆ. ನಿನ್ನ ಪರಾಕ್ರಮಕ್ಕೆ ಮೆಚ್ಚಿ ನಿನ್ನ ಭುಜಬಲವನ್ನು ಪರೀಕ್ಷಿಸಲು ಬಂದಿದ್ದೇನೆ.

ದಶರಥ :—

ಕ್ಷತ್ರಕುಲಾಂತಕನಾದ ಭಾರ್ಗವನೆ ! ಕೃಪೆಮಾಡು ನಮ್ಮನ್ನು ರಕ್ಷಿಸು.

ಭಾರ್ಗವ:—

ದಶರಥ ಚಕ್ರವರ್ತಿಯೇ ! ಭಯಪಡಬೇಡ ನನ್ನ ಪ್ರತಿಜ್ಞೆಯು ಅಧರ್ಮ ಸಂಹಾರಕ್ಕಾಗಿ, ಧರ್ಮರಕ್ಷಕರಾದ ಕ್ಷತ್ರಿಯೋತ್ತಮರಲ್ಲಿ ನನಗೆ ದ್ವೇಷವಿಲ್ಲ.

ಲೋಕಕ್ಷೇಮಾರ್ಥವಾಗಿ ನನ್ನ ತಪಸ್ಸನ್ನೆಲ್ಲಾ ಧಾರೆಯೆರದು ಧರ್ಮರಕ್ಷಣಾರ್ಥವಾಗಿ ಈ ವೈಷ್ಣವ ಧನುಸ್ಸನ್ನು ಶ್ರೀರಾಮನಿಗೆ ಒಪ್ಪಿಸುವುದಕ್ಕಾಗಿ ನಾನು ಬಂದಿದ್ದೇನೆ.

ಶ್ರೀರಾಮನೇ! ಧ ರ್ಮ ರ ಕ್ಷ ಣಾ ರ್ಥ ವಾ ಗಿ ಈ ಮಹಾ ಧನುಸ್ಸನ್ನು ಸ್ವೀಕರಿಸು.

ಶ್ರೀರಾಮನು ಭಾರ್ಗವನಿಗೆ ನಮಸ್ಕರಿಸಿ ವೈಷ್ಣವ ಧನುಸ್ಸನ್ನು ಪರಿಗ್ರಹಿಸುವನು.

ಭಾರ್ಗವ :—

ಸ್ವಸ್ತಿಪ್ರಜಾಭ್ಯ ಪ ರಿ ಪಾ ಲ ಯ ಂ ತಾ ಂ
ನ್ಯಾಯ್ಯೇನ ಮಾರ್ಗೇಣಮಹೀಂ ಮಹೀಶಾಃ

ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾ ಸ್ಸಮಸ್ತಾ ಸ್ಸುಖಿನೋಭವಂತು

ನಾನು ಸಕಲ ಲೋಕಗಳ ಸುಖಕ್ಕಾಗಿ ತಪಸ್ಸನ್ನಾಚರಿಸುವೆನು.
ತಪಸ್ಸಿಗೆ ತೆರಳುವನು.



# ಹೊಣೆಯಾರು ?

೧

ಮಾಧವರಾಯರನ್ನು ಬಲ್ಲವರು ಯಾರೇ ಆಗಲಿ ಅವರನ್ನು ಪುಣ್ಯವಂತರೆಂದು ಒಪ್ಪಿಕೊಳ್ಳಲೇಬೇಕು. ಪಿತ್ರಾರ್ಜಿತವಾದ ಆಸ್ತಿ ಅಷ್ಟೇನೂ ಹೆಚ್ಚಾಗಿಲ್ಲ. ರಾಮನ ಬಯಲಿನಲ್ಲಿ ಹನ್ನೆರಡು ಎಕರೆ ಸ್ವಂತ ಗದ್ದೆ ಶ್ರೀರಂಗಪಟ್ಟಣದ ಬಯಲಿನಲ್ಲಿ ಒಂದು ಎಂಟು ಎಕರೆ ಖಾಯಂ ಗುತ್ತಿಗೆ ಗದ್ದೆ. ನಂಜನಗೂಡಿನ ಹತ್ತಿರ ಒಂದು ವೃತ್ತಿ. ಕೃಷ್ಣರಾಜ ಪೇಟೆಯಲ್ಲಿ ಒಂದು ಭಟಮಾನ್ಯ. ಮೈಸೂರಿನಲ್ಲಿ ಕೋಟೆಯಲ್ಲಿ ಒಂದು, ಅಗ್ರಹಾರದಲ್ಲಿ ಒಂದು, ಅಂತು ಎರಡು ಮನೆಗಳು. ಏನೋ ಮುತ್ತೈದೆಯ ಕೈಯ ಭಿಕ್ಷೆ ಎಂಬಂತೆ ಅರಮನೆಯಿಂದ ತಿಂಗಳಿಗೆ ೬೦ ರೂಪಾಯಿ ವಸ್ತ್ರತೊಡಗೆ ಸಂಬಳ. ಇದಿಷ್ಟು ಅವರ ಉತ್ಪತ್ತಿ.

ಇನ್ನು ಮರ್ಯಾದೆಯ ವಿಚಾರ. ಅದರಲ್ಲೂ ಅವರಿಗೆ ಏನೂ ಕೊರತೆಯಿರಲಿಲ್ಲ. ಅರಮನೆಯಲ್ಲಿ ಬೆಳ್ಳಿಯ ತಟ್ಟೆ, ವೀಳ್ಯ, ಖಾಸಾಹಾರ. ಗುರುಮನೆಯಲ್ಲಿ ಇವರು ಹೋದಾಗಲೆಲ್ಲ ತಪ್ಪದೆ ಶಾಲು ಜೋಡಿಯ ಮರ್ಯಾದೆ. ಅರಮನೆ ಗುರುಮನೆಗಳೆರಡರಲ್ಲೂ ಮರ್ಯಾದೆಯುಂಟೆಂದಮೇಲೆ ಇನ್ನಾರು ರಾಯರಿಗೆ ತಪ್ಪಿ ನಡೆಯುವವರು ? ಅಲ್ಲದೆ, ರಾಯರ ಮುಖದ ಮೇಲೂ ಏನೋ ಇತ್ತು. ಆ

ಗಿರಲು ವಿಾಸೆ ಹುರಿಮಾಡಿ, ತಂಬುಲವನ್ನು ಒತ್ತಿದ ಕೆನ್ನೆಯ ಕೆಂಗಾವಿಯನ್ನು ಸಂಜೆಯ ಆಕಾಶದಂತೆ ಮೆರೆಯುತ್ತ, ವಿಶಾಲವಾದ ಕಣ್ಣಿನ ಧೈರ್ಯದ ನೋಟದಿಂದ ನೋಡುತ್ತ, ಒಂದೂವರೆಮಣದ ದೈಯದಂತಹ ದೊಣ್ಣೆಯನ್ನು ಲೀಲಾಜಾಲವಾಗಿ ಬೀಸಿ ಹಾಕಿಕೊಂಡು, ಜಟ್ಟಿಯಂತೆ ದಿಟ್ಟವಾಗಿ ನಡೆಯುವ ರಾಯರನ್ನು ನೋಡಿದರೆ ಯಾರಿಗೇ ಆಗಲಿ, ಒಂದು ಘಳಿಗೆ ನಿಂತು ನೋಡೋಣವೇ ಎನ್ನಿಸುವುದು. ಓರೆಕೋರೆಯಿಲ್ಲದೆ, ಚೆಂದವಾಗಿ ಸುತ್ತಿರುವ ಕೋರು ರುಮಾಲು, ಸುಕ್ಕುಗಿಕ್ಕಿಲ್ಲದೆ ಈಗತಾನೆ ತೆಗೆದಿಕ್ಕಿಕೊಂಡಿರುವ ಅಗಸನ ಮಡಿಯಂತೆ ಕಾಣುವ ನಿಲುವಂಗಿ, ಅಡ್ಡಹೊದಿಕೆ, ಸೋರೆಯ ಹೂವಿನಂತೆ, ಬೆಳ್ಳಗೆ ಕಂಡವರ ಕಣ್ಣನ್ನು ಕೋರಯಿಸುವ ಕಲಾಪತ್ತಿನ ಪಂಚೆ, ಇದೆಲ್ಲವನ್ನೂ ನೋಡಿದರೆ ಕಂಡು ಮಾತನಾಡಿಸೋಣವೇ ಎನ್ನಿಸುವುದು. ಸೊಗಸುಗಾರ ಭೀಮರಾಯರ ಮಾತಿನಲ್ಲಿ ಹೇಳಬೇಕೆಂದರೆ "ಕಾರಂಜಿಯ ಕೆರೆಯಿಂದ ವ ೂರು ಬಿಂಗಿಗೆ ನೀರು ಹೊತ್ತುಕೊಂಡು ಬಂದಿರುವ ಹೆಂಗಸು ಮೂವತ್ತು ವರ್ಷದವಳಾಗಲೀ, ರಾಯರ ಗಿರಕಿ ಚಡಾವಿನ ಸದ್ದು ಕೇಳಿದರೆ ನಿಂತು, ಕಣ್ಣು ಮರೆಯಾಗುವವರೆಗೂ ಅವರನ್ನು ನೋಡಿಯೇ ಮುಂದೆ ಹೋದಾಳು." ರಾಯರ "ಜೋಕ." ಅಂತಹುದು.

ಮಕ್ಕಳುಮರಿ ವಿಚಾರದಲ್ಲಿಯೂ ರಾಯರಿಗೆ ಕೊರತೆಯಿಲ್ಲ. ಕೈಗೆ ಬಂದ ಇಬ್ಬರು ಗಂಡುಮಕ್ಕಳು, ಗಂಡನ ಮನೆಗೆ ಹೋಗಿ ಮಾನವಾಗಿ ಬಾಳಿಕೊಂಡಿ

ರುವ ಇಬ್ಬರು ಹೆಣ್ಣುಮಕ್ಕಳು. ಯಾವಾಗಲೋ ಒಂದು ಗಂಡು ಒಂದು ಹೆಣ್ಣು ಹೋದುವಂತೆ. ಆದರೇನು? ಮುರಿದ ಕೊಂಬೆಯು ಗುರುತಿದ್ದರೂ ಮರವು ಮುಂದೆ ಮುಂದೆ ಬೆಳೆಯುವುದೇನಾದರೂ ನಿಂತೀತೇ? ಅಥವಾ ಕೊಳಕ್ಕೆ ಕಲ್ಲು ಬಿದ್ದರೆ, ನೀರಿನ ಅಲೆದಾಟವೆಷ್ಟು ಹೊತ್ತು? ಹೋದ ಮಕ್ಕಳ ದುಃಖವು, ಇದ್ದ ಮಕ್ಕಳ ಸಂತೋಷದಲ್ಲಿ ಮುಳುಗಿ ಹೋಗಿತ್ತು.

ನೆರೆಹೊರೆಯ ಹೆಂಗಸರಿಗೆ ಮಾತ್ರ ರಾಯರ ವಿಚಾರದಲಿ ಕೊಂಚ ಅಸಮಾಧಾನ. ಅಥವಾ ಅವರ ವಿಚಾರ ಬಂದಾಗ ಕತ್ತನ್ನು ಸೊಟ್ಟಗಿಟ್ಟು ಹುಬ್ಬನ್ನು ಹಾರಿಸಿ, ವಕ್ರವಾದ ದೃಷ್ಟಿಯಿಂದ, ವಿಚಿತ್ರಭಂಗಿಯಿಂದ, ಅಶ್ವಮುಖದ ಮುದ್ರೆಯಿಂದ, ಕೈ ಹಾಗೆಂದುದನ್ನು ಕಂಡವರು ಕೋಪವೆಂದರೂ ಎನ್ನಬಹುದು. ಅದೂ ಕಾರಣವಿಲ್ಲದ ಕೋಪವಲ್ಲ ಮನೆಯಲ್ಲಿ ತಮ್ಮನ್ನೆಲ್ಲ ಯಜಮಾನರುಗಳು—ಗೌರವಾರ್ಥದ ಬಹುವಚನ—ಏನೇ, ಬಾರೇ, ಹೋಗೇ ಎಂದರೆ, ಅವರೊಬ್ಬರು ಮಾತ್ರ ಹೆಂಡತಿಯನ್ನು ಏನ್ರಿ, ಬನ್ನಿ, ಹೋಗ್ರಿ ಎಂದು ಗೌರವವಾಗಿ ಮಾತನಾಡಿಸುವುದು. ಇದನ್ನು ಸೈರಿಸುವುದು ಹೇಗೆ? ಅಲ್ಲದೆ ಅವರ ಹೆಂಡತಿ ಕಮಲಮ್ಮನವರು ಅರಸಿನ ಕುಂಕುಮಕ್ಕೊಂದು ಬಿಟ್ಟು, ಇನ್ನಾವುದಕ್ಕೂ ಮನೆಬಿಟ್ಟು ಬಂದುದೇ ಇಲ್ಲವೋ! ಮನೆಗೆ ಹೋದರೇನೋ ಯಾರೇ ಆಗಲಿ ಬಾಯಿ ತುಂಬ ಮಾತನಾಡಿಸುವುದೇ ನಿಜ. ಹೋದವರಿಗೆ ಅರಸಿನ ಕುಂಕುಮ ಏನಾದರೂ ಇಟ್ಟು ಅಡ

ಕೆಲಿ ಎಲ್ಲಾ ಕೊಟ್ಟು ನಗುನಗುತ ಹೆಬ್ಬಾಗಿಲವರೆಗೂ ಬಂದು ಬಿಟ್ಟು ಹೋಗುವುದೂ ನಿಜ. ಆದರೇನು? ಹರಟೆಗೆ ಸೇರುವುದಿಲ್ಲ. ಹಳಿಯುವವರ ಜೊತೆಗೆ ಹೊಂದುವುದಿಲ್ಲ ಯಾವಾಗ ನೋಡಿದರೂ ಏನಾದರೂ ಕೆಲಸ. ಇಂತಹ ಕಮಲಮ್ಮನವರ ಗಂಡ ಮಾಧವರಾಯರು. ಅವರ ಮೇಲೆ ಹೆಂಗಸರಿಗೆ ಕೋಪ ಬೇಡವೇ?

೨

ಕೃಷ್ಣರಾಯನು ರಾಯರಿಗೆ ಏನೋ ಬಾದರಾಯಣ ಸಂಬಂಧ. ಅಲ್ಲದೆ "ತನಗೆ ಅಷ್ಟು ಅನುಕೂಲವಿಲ್ಲ. ರಾಯರ ತುಂಬಿದ ಮನೆಯಲ್ಲಿ ತಾನೊಬ್ಬ ಪರದೇಶಿ ಇದ್ದು ಕೊಂಡಿದ್ದರೆ, ಅವರಿಗೇನೂ ನಷ್ಟವಿಲ್ಲ" ಎಂಬ ಭಾವನೆಯಿಂದ ಹುಟ್ಟಿದ ಆಶ್ರಯ ಬುದ್ಧಿಯು ಅವರಿವರಿಗೆ ಒಂದು ತರದ ಹೊಸ ಸಂಬಂಧವನ್ನು ಬೆಳೆಸಿತ್ತು. ಕೃಷ್ಣರಾಯರು ಪಗಡೆ, ಇಸ್ಪೀಟು ಮುಂತಾದ ಆಟಗಳಲ್ಲಿ ಬಹು ಚತುರರು. ರಾಯರಿಗೆ ಬೇಸರವಾದಾಗ, ಹೊತ್ತು ಕಳೆಯುವುದಕ್ಕೆ ಒಂದು ಜೊತೆ ಬೇಕು. ಸರಿಸಮಾನರ ಜೊತೆಯಲ್ಲಿ ಎಂದರೆ ಮಾನ ಬಿಗುಮಾನಗಳು ಹೆಚ್ಚು. ಆದರಿಂದ ಆಶ್ರಿತರ ಜೊತೆಯಲ್ಲಿ ಕಾಲಕಳೆಯುವರು. ಅದೂ ಇರುವ ಇಲ್ಲದ ನೆಂಟತನಕ್ಕೆ ಬಣ್ಣ ಕೊಟ್ಟಿತ್ತು.

ಒಂದು ದಿನ ಮಧ್ಯಾಹ್ನ ಮೂರುಘಂಟೆಯ ಸಮಯ ರಾಯರಿಬ್ಬರೂ ಪಗಡೆಯಾಡುತ್ತ ಕುಳಿತಿದ್ದಾರೆ. ಮಾಧವರಾಯರಿಗೆ ಇನ್ನೊಂದು ಎರಡಾರು ಬಿದ್ದರೆ ಉಳಿದಿರುವ ಕಾಯೊಂದು ಹಣ್ಣಾಗಿ ಗೆಲುವು ಕೈಸೇರುತ್ತದೆ. ಹೀಗಿರುವಾಗ ಕೃಷ್ಣರಾ

ಯರು, ಸಣ್ಣಗೆ, ಎದುರಾಳಿಯ ಮನಸ್ಸನ್ನು ಗೆಲ್ಲಬೇಕೆಂದುಕೊಂಡಿರುವಾಗ ಆಡುವ ವಿದುನುಡಿಯನ್ನು ಮೊದಲು ಮಾಡಿದರು. "ಒಬ್ಬನು ಈ ಊರಿಗೆ ಬಂದಿದ್ದಾನೆ. ಬೊಮ್ಮಯ್ಯನವರ ಛತ್ರದಲ್ಲಿ ಇಳಿದಿದ್ದಾನೆ." ದಾಳವುರುಳಿತು. "ಸದಿ" ಬಿತ್ತು. ರಾಯರ ಮೊಕವು ಕೆಂಪಾಯಿತು. ಕೃಷ್ಣರಾಯರು ಹೊಡೆಯಬೇಕಾಗಿದ್ದ ಕಾಯನ್ನು ಹೊಡೆಯದೆ ಮಾತಿನಲ್ಲಿ ಮರೆತಂತೆ ನಟಿಸಿ, ಬೇರೆ ಕಾಯನ್ನು ನಡೆಯಿಸಿದರು. ಮಾಧವ ರಾಯರು ಕೂಡಲೇ ದಾಳವನ್ನು ಉರುಳಿಸಿದರು. ಎಂಟು ಬಿತ್ತು. ಕಾಯನ್ನು ಮುಂದಕ್ಕೆ ನಡೆಯಿಸಿ "ಹೂ. ಆ ಮೇಲೆ?" ಎಂದರು.

ಕೃಷ್ಣ:—ಕಥೆಯೆಲ್ಲ ಕೇಳಿದರೆ ಆಶ್ಚರ್ಯವಾಗುತ್ತದೆ. !

ಮಾಧವ:—ಏನು ಕಥೆ?

ಕೃಷ್ಣ:—ಆತನ ಕಥೆ. ಬೆಂಗಳೂರಲ್ಲಿ ಮೂರು ತಿಂಗಳಿದ್ದನಂತೆ. ನಾರಾಯನ ಮನೆಯಲ್ಲಿ ಹಣ ತೆಗೆದನಂತೆ.

ಮಾಧವ:—ಸರಿ, ಹಣ ತೆಗೆಯುವ ಕಥೆ ತಾನೆ? ನನಗದು ಬೇಡಪ್ಪ ಇನ್ನೇನಾದರೂ ಹೇಳು. ಈ ಗುಂಪೇ ಹಾಳು ಗುಂಪು.

ಕೃಷ್ಣ:—ಮೊನ್ನೆ ದಿನ ನೀವು ಆ ಗ್ರಂಥ ಓದುತ್ತಿದ್ದಾಗ ದ್ರವ್ಯಾಂಜನದ ವಿಚಾರ ಬರಲಿಲ್ಲವೆ?

ಮಾಧವ:—ನಾನು ದ್ರವ್ಯಾಂಜನವಿಲ್ಲವೆನ್ನುವುದಿಲ್ಲ. ಶಾಸ್ತ್ರಗಳಲ್ಲಿ ಎಲ್ಲೆಲ್ಲೂ ಈ ವಿಷಯ ಬಂದಿದೆ.

ಆದರೆ ಅದನ್ನು ಸರಿಯಾಗಿ ಉಪಯೋಗಿಸುವವರು ಮಾತ್ರ ವಿರಳ.

ಕೃಷ್ಣ :—ಈತ ಸುದರ್ಶನೋಪಾಸಕನಂತೆ!

ಮಾಧವ:—ಇರಬಹುದು. ಅವನನ್ನು ನಂಬಿದವರು ಪಾಂಚಜನ್ಯೋಪಾಸಕರೋ ಆಗುವರೋ ಏನೋ ?

ಕೃಷ್ಣ :—(ಒಂದು ದಪ್ಪ ನಗುವನ್ನು ನಕ್ಕು) ಅಲ್ಲಾ ಅಂದರೆ, ನೀವು ಯಾವಾಗಲೂ ಹೀಗೆ ಹಾಸ್ಯ ಮಾಡುವುದು. ಆತನು ಹೋದವರೊಡನೆ ಹೆಚ್ಚಾಗಿ ಮಾತನ್ನೇ ಆಡುವುದಿಲ್ಲ ತನ್ನಪಾಡಿಗೆ ತಾನು ಕುಳಿತಿರುತ್ತಾನೆ. ಅಂಥಾದುದರಲ್ಲಿಯೂ ಆಗಲೇ ಆತನ ಮುಂದೆ ಒಂದು ಪರಿಷೆ ಸೇರಿಬಿಟ್ಟಿದೆ

ಮಾಧವ :—(ಒಂದು ಸಲ ದೊಡ್ಡದಾಗಿ ಆಕಳಿಸಿ) ಸರಿ. ಮಾತನಾಡಿದರೆ ಗುಟ್ಟು ಹೊರಬೀಳುತ್ತದೆ. ಪಕ್ಕಾ ಗಂಟುಕಳ್ಳನಿರಬೇಕು.

ಕೃಷ್ಣ :—ಕೊನೆವರೆಗೂ ಕೇಳಬಾರದೆ? ಆತನು ಬಂದಿರವುದು ಬೇರೆ ಉದ್ದೇಶವಂತೆ. ಶ್ರೀರಂಗಪಟ್ಟಣದಲ್ಲಿ ದರಿಯಾದೌಲತ್ತಿಗೆ ಹೋಗುವ ಕೋಟೆ ಬಾಗಿಲು ಇದೆಯಲ್ಲ! ಅಲ್ಲಿ ಆ ಎರಡು ಬಾಗಿಲ ಮಧ್ಯೆ ಸುಲ್ತಾನನ ಖಜಾನೆ ಭೂಮಿಯೊಳಗೆ ಇದೆಯಂತೆ! ಅಲ್ಲಿ ನಾಲ್ಕು ಕೋಟಿಯುವರೆಗೂ ಸುಲ್ತಾನೀ ವರಹಗಳು ತುಂಬಿವೆಯಂತೆ! ಇನ್ನು ರತ್ನಪಡಿಯಂತೂ ಹೇಳುವುದಕ್ಕಾಗುವುದಿಲ್ಲವಂತೆ. ಅದರಮೇಲೆ ಒಂದು ಪಿಶಾಚ ಇದೆಯಂತೆ! ಏನಾದರೂ ಮಾಡಿ ಅದನ್ನು ಹೊಡೆದುಬಿಡಬೇಕು ಎಂದು ಅವರ ಇಚ್ಛೆಯಂತೆ!

ಆದಕ್ಕಾಗಿ ಅವರು ಬಳ್ಳಾರಿಯ ಕಡೆಯಿಂದ ಬಂದಿದ್ದಾರೆಯಂತೆ !

ಮಾಧವ :—ಇದಿಷ್ಟು ಯಾರು ಹೇಳಿದರು ನಿನಗೆ?

ಕೃಷ್ಣ :—ನಾನೇನು ಸಾಮಾನ್ಯನೆ ? ಇದಕ್ಕಾಗಿ ಮೂರುದಿನ ಆಶ್ರಯಮಾಡಿ, ಅವರಿಂದಲೇ ಎಲ್ಲಾ ಹೊರಡಿಸಿದೆ.

ಮಾಧವ :—ಇನ್ನೇನು ಕೃಷ್ಣರಾಯರು ಕುದರೆ ಸಾರೋಟು ಇಡಬಹುದಲ್ಲ!

ಕೃಷ್ಣ ;—ಸರಿ! ನನ್ನದೇನು ಬಿಡಿ. ಉರಿಯುವ ದೀಪಕ್ಕೆ ಇನ್ನಷ್ಟು ಎಣ್ಣೆ ಹಾಕಬೇಕೆಂತ ನನ್ನ ಪ್ರಯತ್ನ.

ಮಾಧವ :—ಹೂ. ಮುಂದಕ್ಕೆ !

ಕೃಷ್ಣ :—ನಮ್ಮ ಶಂಕರರಾಯನನ್ನು ಕರೆದುಕೊಂಡು ಹೋಗಿದ್ದೆ. ಸಾಮುದ್ರಿಕ ನೋಡಿದರು. ಇವನಿಗೆ ಪ್ರಾಪ್ತಿ ಇದೆ ಎಂದಿದ್ದಾರೆ.

ಮಾಧವ :—ಸರಿ! ಇನ್ನೇನು ಆಗಬಹುದಲ್ಲ? ಯಾತಕ್ಕೆ ತಡವು ?

ಕೃಷ್ಣ :—ಏನೂ ಇಲ್ಲ ನಮ್ಮ ಮನೆಗೆ ಈಶಾನ್ಯದ ಮೂಲೆಯಲ್ಲಿ ಮಹಡಿ ಮೆಟ್ಟಲಿನ ಕೆಳಗೆ, ಮೂರು ಕೊಡಗಳು ಇವೆಯಂತೆ.

ಮಾಧವರಾಯರು ದಿಂಬು ಒರಗಿಕೊಂಡು ಕುಳಿತಿದ್ದವರು ಎದ್ದು ಕುಳಿತುಕೊಂಡು ಕೇಳಿದರು.

ಕೃಷ್ಣ :—ಪೀಡೆ ಪ್ರಾರಬ್ಧ ಏನೂ ಇಲ್ಲವಂತೆ; ಅದನ್ನು ಇಟ್ಟು ನೂರುವರ್ಷವಾಗಿದೆಯಂತೆ. ಯಾವ

ನೋ ಪಾಳೆಯಗಾರ ಇಟ್ಟಿದ್ದಂತೆ! ಒಂದಾಳುದ್ದದ ಒಳಗೆ ಇದೆಯಂತೆ! ಬೇಕಾದರೆ ನಾವೇ ಅಂಜನಾ ಹಾಕಿ ನೋಡಿಬಿಡೋಣ

ಮಾಧವ :—(ಒಂದು ಘಳಿಗೆ ಸುಮ್ಮನಿದ್ದು) ಅಯ್ಯೋ! "ಆಡುವ ಮೋಡನೋಡಿ" ಎನ್ನುವ ಗಾದೆ ಯಹಾಗೆ ಮಾಡುವುದು ಬುದ್ಧಿವಂತಿಕೆಯಲ್ಲ. ಏನೋ ದೇವರು ಕೊಟ್ಟಹಾಗೆ ಇದೆ. ಸಾಕು. ಅದನ್ನು ತಿಂದುಕೊಂಡಿರೋಣ. ಹೆಚ್ಚು ಆಶೆ ಬಾರದು ಬ್ರಾಹ್ಮಣರಿಗೆ.

ಕೃಷ್ಣ :—ನನಗೂ ಹಾಗೇ ಎನ್ನಿಸಿತು. ಆದರೆ ಒಂದು ನೆನಪಾಯಿತು. ಒಂದೊಂದು ಸಲ ಗ್ರಾಮದ ವಿಚಾರ ಹೇಳಿದ್ದೀರಿ. ದೊಡ್ಡರಾಯರು, ಹಗಲೂ ರಾತ್ರಿ ಹಂಬಲಿಸುತ್ತಿದ್ದುದು ನಾನಿನ್ನೂ ಮರೆತಿಲ್ಲ ಏನೋ ಇನಾಂದಾರ್‍ರು ಎಂತ ತಾವಾದರೂ ಎನ್ನಿಸಿ ಕೊಂಡರೆ, ನನಗೇನೋ ನೆಮ್ಮದಿ. ತಾವೇನು ದಿವ ಸಕ್ಕೆ ಅಕ್ಷರ ಲಕ್ಷ ಪಂಚಾಕ್ಷರೀ ಹಿಡಿದು ಬಿಟ್ಟಿದ್ದೀರಿ. ಇನ್ನೇನೂ ಬೇಕಾಗಿಲ್ಲ. ಶಂಕರರಾಯ ನಾರಾಯಣ ರಾಯ ಅವರನ್ನು ಅಷ್ಟು ನೋಡಿ. ಮುಳವಳ್ಳಿ ಹತ್ತಿರದ ಎರಡು ಗ್ರಾಮಗಳೂ ಮಗ್ಗುಮಗ್ಗುಲಲ್ಲಿಯೇ ಇವೆ. ದೇವರದಯದಿಂದ ಅನುಕೂಲವಾದರೆ,ಎಷ್ಟು ಗೌರವ! ಎಷ್ಟು ಮರ್ಯಾದೆ! ಸಾಲದೆ, ಅಲ್ಲಿ, ಸೇಂದಿ, ಸಂದಲ್ ಸಹಿತ ಇನಾಂದಾರ್‍ರದೇ! ಮುಖ್ಯ ದೊಡ್ಡ ರಾಯರು ಒದ್ದಾಡಿಕೊಳ್ಳುತ್ತಿದ್ದುದು ನೆನಸಿಕೊಂಡರೆ ನನಗೆ ಹೇಗಾಗುತ್ತದೆ ಎನ್ನುವುದು ಹೇಳಲಾರೆ. ಇಷ್ಟರಮೇಲೆ ಇದರಲ್ಲಾದರೂ ಏನಿದೆ? ಅಂತಹ

ದೊಡ್ಡ ಅಪಾಯವಾಗಲೀ, ಕಷ್ಟವಾಗಲೀ, ಏನೂ ಇಲ್ಲ. ಒಂದು ನೂರು ರೂಪಾಯಿ ಆದೀತೆ? ಅಲ್ಲಿಗೆ ತಲೆಬಲೆಯಾಗಿ ಹೋಯಿತು. ನೂರು ರೂಪಾಯಿ ಎಲ್ಲಿ ಹೋಗುತ್ತದೋ ಎಲ್ಲಿ ಬರುತ್ತದೋ?

ಮಾಧವ:—(ಸುಮ್ಮನಿದ್ದರು ಮನಸ್ಸು ಯೋಚನೆಯಲ್ಲಿ ಮುಳುಗಿ ಹೋಗಿತ್ತು) ಅಷ್ಟು ಹೊತ್ತಾದ ಮೇಲೆ "ಏನೋ ಯೋಚನೆ ಮಾಡೋಣಪ್ಪ. ಏನೂ ಹೇಳಲಾರೆ ಈಗ" ಎಂದರು. ಕೃಷ್ಣರಾಯರು "ರಾಯಿ, ಅಡೆಹಾಕಿದ ಹೊರತು ಹಣ್ಣಾಗವುದಿಲ್ಲ" ಎಂದು ಸುಮ್ಮನಾದರು.

೩

ಎಂಟು ದಿನವಾಯಿತು. ಮಾಧವರಾಯರ ಮನೆಯಲ್ಲಿ ಭೂಪರೀಕ್ಷೆಯಾಯಿತು. ರಾಘವಾಚಾರ್ಯರು (ಅವರೇ ಮಂತ್ರವಾದಿಗಳು. ಅವರಿಗೆ ಮಂತ್ರಮೂರ್ತಿಗಳೆಂದೂ ಹೆಸರು.) ಬಂದು ನೆಲಕ್ಕೆ ಏನೋ ಹಚ್ಚಿ ಸಾರಿಸಿದರು. ಮರುದಿವಸ ಭೂಮಿಯು ಬಾಯಿ ಬಿಟ್ಟದ್ದಂತೆ ತೋರಿತು.

ಅಂಜನ ಹಾಕಿ ನೋಡಿದುದೂ ಆಯಿತು. ರಾಯರ ಮನೆಯವರು ಯಾರಿಗೂ ಅಂಜನ ಕಾಣಲಿಲ್ಲ. ಹೊರಗಿನವರು ಒಬ್ಬರನ್ನು ಕರೆತಂದು ತೋರಿಸಿದುದಾಯಿತು. "ಮೂರು ಕೊಡವಿರುವುದು ನಿಜ. ಆದರೆ ಗೋಡೆಯ ಮಗ್ಗುಲಲ್ಲಿದೆ. ಮುಂದಕ್ಕೆ ಪೂರ್ವದ ಕಡೆಗೆ ಪ್ರಯಾಣ ಮಾಡುತ್ತಿದೆ. ಆದಷ್ಟು ಬೇಗ ತೆಗೆದುಬಿಡುವುದು ಒಳ್ಳೆಯದು. ಅಲ್ಲಿ ಒಂದು ಗ್ರಹವಿದೆ. ಅದಕ್ಕೆ ಹದಿನಾಲ್ಕು ದಿನ ಪೂಜೆ

ಹಾಕಿ, ಹದಿನೈದನೇ ದಿನ ಪೂರ್ಣಾಹುತಿ ಕೊಟ್ಟು, ಕೊಡಗಳನ್ನು ಈಚೆಗೆ ತೆಗೆಯಬೇಕು. ಆಮೇಲೆ ಹದಿನೈದು ದಿನ ಯಾರಾದರೂ ಹೆಂಗಸರು ಪೂಜೆ ಮಾಡಿ, ಹದಿನಾರನೆಯ ದಿನ ಅದರಲ್ಲಿರುವುದನ್ನು ತೆಗೆದುಕೊಳ್ಳಬಹುದು. ಮೂರು ಕೊಡದಿಂದ ಸುಮಾರು ಒಂದು ಲಕ್ಷರೂಪಾಯಿ ಆದೀತು ಎಲ್ಲವೂ ನಗಗಳೇ ! ಒಂದೊಂದು ಕೊಡದಲ್ಲಿ ಒಂದೊಂದು ತೊಡವೆ ಒಡವೆಗಳಿವೆ" ಹೀಗೆಂದು ಅಂಜನದಿಂದ ತಿಳಿಯಿತು. ಬಂದು ಹೇಳಿದವನು ಸ್ವಯಂ ಹನುಮಂತ! ಸಂದೇಹ ಪಡುವುದು ಹೇಗೆ?

ದಿನಶುದ್ಧಿಯನ್ನು ನೋಡಿ, ಅಗೆಯುವುದಕ್ಕೆ ಆರಂಭವಾಯಿತು. ಸುಮಾರು ರಾತ್ರಿ ಹನ್ನೊಂದು ಘಂಟೆ. ಮಂತ್ರಮೂರ್ತಿಗಳೇ ಮೊದಲು ಮಾಡಿದರು. ಯಾರೂ ಆ ತರದ ಕೆಲಸಕ್ಕೆ ಪಳಗಿದವರಲ್ಲ; ಎಲ್ಲರಿಗೂ ಅಂಗೈಯ್ಯ ತುಂಬ ಹೊಪ್ಪಳೆಗಳು. ಆದರೇನು ? ಲಕ್ಷ ರೂಪಾಯಿನ ಗಂಟು. ಯಾರಿಗುಂಟು ? ಯಾರಗಿಲ್ಲ? ಆಶೆಯು ಚಾಟಿಯ ಪೆಟ್ಟು ಬೀಳುತ್ತಿರಲು, ದೇಹದ ಕುದುರೆಯು ಓಡದೆ ನಿಲ್ಲುವುದು ಹೇಗೆ ?

ಹಾರೆ ಗುದ್ದಲಿಗಳು ಹಾರಾಡಿದವು. ಅಡಿಗಡಿಗೂ ಮಂತ್ರಮೂರ್ತಿಗಳ ಪೂಜೆ. ಅಂತೂ ಅಳುದ್ದದ ಗುಂಡಿ ಬಿದ್ದು. ಮನೆಯಲ್ಲಿ ಮಣ್ಣಿನ ರಾಶಿಯೇನೋ ಬಿತ್ತು.

ಇನ್ನೊಂದು ಅಡಿ ತೆಗೆದರೆ, ಮೂರು ಕೊಡಗಳು. ಮಂತ್ರಮೂರ್ತಿಗಳು ಕಾತರತೆಯ ಮೂರ್ತಿಯಾಗಿ ಕಾಯ್ದುಕೊಂಡಿದ್ದಾರೆ; ಹಾರೆಯೊಂದು ಕಲ್ಲನ್ನು ತಗಲಿ "ಕಣೀಂ" ಎಂದಿತು

"ಹೋ! ಹೋ! ನಿಲ್ಲಿಸಿ! ನಿಲ್ಲಿಸಿ!" ಎಂದರು ಆಗ ಯುತ್ತಿದ್ದವರೂ ನಿಲ್ಲಿಸಿದರು.

ಮರುದಿನದಿಂದ ಆ ಸ್ಥಳಕ್ಕೇ ಪೂಜೆಗೆ ಆರಂಭವಾಯಿತು. ದಿನದಿನವೂ ಮೂರೂ ಕೂಡುವ ಸಂಜೆಯ ಹೊತ್ತಿನಲ್ಲಿ ಮಂತ್ರಮೂರ್ತಿಗಳು ಬರುವರು ನಿತ್ಯವೂ ಬೇಕಾದಷ್ಟು ಹೂ ಅರಿಸಿನ, ಕುಂಕುಮ, ಕೆಂಪು ಅನ್ನದ ಬಲಿ. ದಿನವೂ ಒಂದೊಂದು ಹಿಡಿ ಅನ್ನವನ್ನು ಗ್ರಹ ತೃಪ್ತಿಗೆಂದು ಮಂತ್ರಮೂರ್ತಿಗಳು ಅಲ್ಲಿಯೇ ಚೆಲ್ಲಿ ಬಿಡುವರು. ಅದರ ವಾಸನೆ ತುಂಬಿ ಹೋಗಿತ್ತು ಮೊಕ ಇಡುವುದಕ್ಕೆ ಆಗುತ್ತಿರಲಿಲ್ಲ.

೪

ಕೃಷ್ಣರಾಯರಿಗೆ ಪರಮ ಸಂತೋಷ "ರಾಯರ ಮನೆಯನ್ನು ಸೇರಿ ಸುಮಾರು ೩೦ ವರುಷವಾಯಿತು. ಇಂದಿಗೆ ಆ ಋಣವನ್ನು ತೀರಿಸುವುದು ಸಾಧ್ಯವಾಯಿತು." ಎಂದ. ಹಿಗ್ಗಿಹೋಗಿದ್ದಾರೆ. ಅವರ ಯೋಚನೆಯೇ ಒಂದು ರೀತಿಯಾಗಿ ನಿರರ್ಗಳವಾಗಿ ಹೊರಟು ಹೋಗುತ್ತಿತ್ತು. ಏನು ಮಾಡಿದರೂ ತಡೆಯಲು ಸಾಧ್ಯವಾಗಲಿಲ್ಲ

ಎರಡು ಗ್ರಾಮಗಳನ್ನೂ ಕೊಂಡು ಕೊಂಡು ಬಿಡುವುದ. ಎರಡರಿಂದಲೂ ಸುಮಾರು ಅರವತ್ತು ಸಾವಿರವಾದೀತೆ? ಆದೀತೆ ಏನು? ವಿಚಾರಿಸಿದರೆ ಆಗಿಹೋಯಿತು. ಕೊಂಡು ಕೊಟ್ಟವನೆಂದು ನನ್ನ ಮೇಲೆ ರಾಯರಿಗೆ ವಿಶ್ವಾಸ ಹೆಚ್ಚಾಗಿ, ನನ್ನನ್ನೇ ಅವರ ಕಡೆಯಾಗಿ ನೋಡಿಕೊಳ್ಳಲು ನಿಯಮಿಸುತ್ತಾರೆ. ಪೆಟ್ಟಿಗೆ ಗಾಡಿಯಲ್ಲಿ ಕುಳಿತುಕೊಂಡು ಜೋಡಿ ಶಾಲು ಹೊದೆದುಕೊಂಡು ಹತ್ತು ಬೆರಳಿಗೂ ಹತ್ತು

ಉಂಗುರ ಹಾಕಿಕೊಂಡು, ಊರವರು ಎಲ್ಲರೂ ಕೈ ಮುಗಿಯುವ ಹಾಗೆ ಮಾಡಿಕೊಂಡು ತಿರುಗಬೇಕು. ರಾಯರಿಗೆ ಅನುಮಾನ ಬರಬಂತೆ, ಎಲ್ಲವನ್ನೂ ನೇರವಾಗಿಟ್ಟು ಕೊಂಡಿರಬೇಕು. ರಾಯರಿಗಿಂತಲೂ ಹೆಚ್ಚಾಗಿ, ಅಪ್ಪನ ಶ್ರಾದ್ಧ ಮಾಡಬೇಕು. ಒಂದು ರೂಪಾಯಿಯೇ ದಕ್ಷಿಣೆ ಕೊಡಬೇಕು ಭೂರಿ ಭೋಜನ ಮಾಡಿಸಬೇಕು. ರಾಯರು ಬಂದು, "ಏನು ಕೃಷ್ಣರಾಯರೇ! ನಿಮ್ಮಪ್ಪನ್ನ ಸ್ವರ್ಗಕ್ಕೆ ಕಳುಹಿಸಿ ಬಿಟ್ಟರೋ"? ಎನ್ನಬೇಕು. ತಾವು ಆ ಮಡಿ ಪಂಚೆಯನ್ನು ಉಟ್ಟುಕೊಂಡು ನಿಂತ ಹಾಗೆಯೇ ಕೈಮುಗಿದು "ಎಲ್ಲವೂ ತಮ್ಮ ಅನ್ನದ ಪ್ರಭಾವ!" ಎನ್ನಬೇಕು. ಇತ್ಯಾದಿ ಯೋಚನೆಗಳು ಆತನ ಮನಸ್ಸನ್ನು ಆಕರ್ಷಿಸಿ ಬಿಟ್ಟಿದ್ದವು

ಆಲೋಚನೆಯು ಬಲವಾದಂತೆಲ್ಲಾ ಸಂಕಲ್ಪವು ಸ್ಥಿರವಾಗಿ, ಕಾರ್ಯವು ರೂಪಗೊಂಡು ಕೈ ಸೇರುವ ಯತ್ನಗಳನ್ನು ಮಾಡುವದಕ್ಕೆ ಮೊದಲಾಯಿತು.

ಕೊಂಡುಕೊಳ್ಳಬೇಕೆಂದಿದ್ದ ಗ್ರಾಮಗಳ ಸ್ವಾಮಿಗಳನ್ನು ಹೋಗಿ ನೋಡಿ ಅವರೊಡನೆ ಮೊದಲ ಮಾತುಕಥೆಯನ್ನೆಲ್ಲ ಆಡಿದುದಾಯಿತು. ಮೊದಮೊದಲು ಬೆಲೆಯು ಸರಿ ಬೀಳಲಿಲ್ಲ. ಅದಕ್ಕಾಗಿ ಕೊಂಚ ದಿನ ತಿರುಗಾಡಿ ಅದನ್ನು ಗೊತ್ತುಮಾಡಿಯೂ ಆಯಿತು.

ಮರುದಿನ ರಾಯರ ಮನೆಯಲ್ಲಿ ಸಮಾರಾಧನೆ. ಕೃಷ್ಣರಾಯರ ಓಡಾಟವೇ ಓಡಾಟ. ಕಾರಣವನ್ನು ಕೇಳಿದರೆ ಕೃಷ್ಣರಾಯರು ಗುಟ್ಟಾಗಿ "ರಾಯರು ಗ್ರಾಮ ಕೊಂಡುಕೊಳ್ಳಬೇಕೆಂದಿದ್ದಾರೆ ಅದಕ್ಕಾಗಿ ಈ ಸಮಾರಾಧನೆ" ಎಂದು ಕಿವಿಯಲ್ಲಿ ಹೇಳುವರು.

ಎರಡು ದಿನದಲ್ಲಿ ಗುಟ್ಟು ರಟ್ಟಾಗಿ ಹೋಯಿತು. ಎಲ್ಲಿಲ್ಲಿಯೂ ಅದೇ ಮಾತಾಯಿತು.

ಕೃಷ್ಣರಾಯರ ನಗುಮೊಗವು ಸುದ್ದಿಗೆ ಬಣ್ಣ ಗೊಟ್ಟು ಬೆಳೆಸಿ, ಹಣ್ಣು ಮಾಡಿತು.

* * *

ವಾಯಿದೆಗೆ ಸರಿಯಾಗಿ ಮಂತ್ರ ಮೂರ್ತಿಗಳು ಕೊಡಗಳನ್ನು ಈಚೆಗೆ ತೆಗೆದರು. ಮೂರೂ ಮಣ್ಣಿನ ಕೊಡಗಳು. ಪುರಾತನವಾದ ಮಡಿಕೆಗಳ ಹಾಗೆ ಅವೂ ಹೊಳಪು ಇಲ್ಲದೆ ಮಂಕಾಗಿಯೇ ಇವೆ. ಒಂದೊಂದು ಕೊಡವೂ, ಒಂದು ಆಳು ಎತ್ತುವುದು ಕಷ್ಟ ಅಷ್ಟು ಭಾರವಾಗಿದೆ ಅಂತು ಕಷ್ಟಪಟ್ಟು ಮುಕ್ಕರಿದುಕೊಂಡು, ಹೊತ್ತುಕೊಂಡು ಹೋಗಿ, ಮಹಡಿಯ ಮೇಲಿನ ಒಂದು ಕಿರುಮನೆಯಲ್ಲಿಟ್ಟು, ಬಾಗಿಲಿಗೆ ದಪ್ಪ ಬೀಗವನ್ನು ಹಾಕಿದರು ಮರುದಿನದಿಂದ ಕವುಲಮ್ಮನವರು ಹದಿನಯ್ದು ದಿನ ಪೂಜೆಮಾಡಬೇಕಾಗಿ ಗೊತ್ತಾಯಿತು.

ಅಂದಿನ ರಾತ್ರೆ ಮಾಧವರಾಯರಿಗೆ ನಿದ್ದೆ ಹತ್ತಲಿಲ್ಲ. "ಇದೇನು ಈ ಮೂರು ಕೊಡಗಳು ? ನಿಜವಾಗಿಯೂ ಇದರಲ್ಲಿ ಒಡವೆಗಳಿವೆಯೇ ? ಅಥವಾ ಏನಾದರೂ ಮೋಸ ನಡೆದಿರಬಹುದೆ ? ಮೋಸವಾದರೆ, ಯಾರು ಮೋಸಮಾಡಬೇಕು? ಉದ್ದೇಶವೇನು? ಕೃಷ್ಣರಾಯನು ಮೋಸಮಾಡುವವನಲ್ಲ. ಮೂವತ್ತು ವರುಷದಿಂದ ಮನೆಯ ಹಿರಿಯ ಮಗನಿಗಿಂತ ಹೆಚ್ಚಾಗಿ ನಂಬಿಕೆಯಾಗಿರುವವನು ಮೋಸ ಮಾಡುವುದುಂಟೆ?"

"ಮಂತ್ರವಾದಿ! ಅವನೇನಾದರೂ ಮೋಸಗಾರನೋ? ಮುಖವನ್ನು ನೋಡಿದರೆ, ಹಾಗೆ ಕಾಣುವುದಿಲ್ಲ. ಅಲ್ಲದೆ ಅವನು ಇದುವರೆಗೂ ಏನೂ ಕೇಳಿಲ್ಲ. ನೋಡಿದರೆ ಅಂತಹ ಆಶಾಪರನ ಹಾಗೂ ಕಾಣುವುದಿಲ್ಲ. ಆಶೆ ಬುರುಕನಲ್ಲದವನು ಮೋಸ ಮಾಡುವುದು ಹೇಗೆ?"

"ಅದು ಹೇಗಾದರೂ ಇರಲಿ. ಮೂರುಕೊಡ-ಒಂದು ಲಕ್ಷದವರೆಗೂ ಹಣ ಸಿಕ್ಕಿದ್ದರೂ ಮನಸ್ಸೇಕೆ ಉತ್ಸಾಹ ಪಡದೆ ಸುಮ್ಮನಿದೆಯಲ್ಲ! ಇದೇನು ವಿಚಿತ್ರ!" ಎಂದು ವಿಚಾರ ಮಾಡುತ್ತಿರುವುದರಲ್ಲಿ ಸಮರಾತ್ರಿಯಾಯಿತು.

ರಾಯರು ಇನ್ನೂ ಹಾಗೆಯೇ ಯೋಚಿಸುತ್ತ ಹೊರಗಿನ ಜಗತ್ತನ್ನೇ ಮರೆತಿರುವಾಗ, ಮಗ್ಗುಲಲ್ಲಿಯೇ ಮಲಗಿದ್ದ ಕಮಲಮ್ಮನವರ ಕನವರಿಕೆಯು ರಾಯರನ್ನು ಎಚ್ಚರಗೊಳಿಸಿತು. "ಬೇಡಿ. ಬೇಡಿ. ಗ್ರಾಮವಿಲ್ಲದಿದ್ದರೆ ನಷ್ಟವಿಲ್ಲ. ಸೊಸೆಯರಿಬ್ಬರಿಗೂ ಒಂದೊಂದು ತೊಡವೆ ಒಡವೆ ಇಟ್ಟು ಕಣ್ಣು ತುಂಬ ನೋಡಿ ಸಂತೋಷ ಪಡೋಣ." ರಾಯರು "ಹೆಣ್ಣಿನಾಶೆ! ಹೆಣ್ಣು ಎಷ್ಟು ದಿನವಾದರೂ ಹೆಣ್ಣೆ!" ಎಂದು ಸಣ್ಣಗೆ ನಗುತ್ತ ಮಲಗಿಕೊಂಡರು.

ಮನಸ್ಸು ಸ್ವಸ್ಥವಾಗಿತ್ತು. ರಾಯರಿಗೆ ಸುಖಸ್ವಪ್ನವಾಗಿದ್ದರೆ ಆಶ್ಚರ್ಯವಾಗುತ್ತಿರಲಿಲ್ಲ. ಆದರೆ ಕಮಲಮ್ಮನವರು ಎಚ್ಚರವಾಗಿದ್ದರೆ, ರಾಯರನ್ನು "ಅದೇಕೆ? ರಾತ್ರಿ ಹಾಗೆ ಕನವರಿಸುತ್ತಿದ್ದಿರಿ? ಆ ಹೊರಳಾಡುತ್ತಿದ್ದುದು ನೋಡಿದರೆ ಕೆಟ್ಟ ಕೆಟ್ಟ ಕನಸುಗಳಾಯಿತು. ಎನ್ನುವ ಹಾಗಿದೆ." ಎನ್ನುತ್ತಿದ್ದರು.

ಮರುದಿನದಿಂದ ಧನಲಕ್ಷ್ಮಿಯ ಪೂಜೆಯು ಕ್ರಮವಾಗಿ ನಡೆಯುತ್ತಿದೆ. ಕಮಲಮ್ಮನವರು ಮಾಡಿದ ಕೆಲಸದಲ್ಲಿ ಕೊಂಕು ಕಾಣುವುದು ಇತರರಿಗೆ ಸಾಧ್ಯವಿಲ್ಲ. ಪೂಜೆಯೂ ಹಾಗೆ ಕ್ರಮವಾಗಿ ನಡೆಯುತ್ತಿತ್ತು.

* * *

ಕೊಡೆಯಾಲದ ಕೃಷ್ಣಶೆಟ್ಟರ ಮನೆಗೆ ಕೃಷ್ಣರಾಯರು ಒಂದು ವಂಕಿ ಎರಡು ನಾಗಮುರಿಗೆ ತಂದಿದ್ದಾರೆ. ಮೂರೂ ಸೇರಿ ಎರಡೂವರೆ ಸೇರು ಭಂಗಾರ, ಅಪರಂಜಿ. ಅದನ್ನು ಇಟ್ಟುಕೊಂಡು ಐನೂರು ರೂಪಾಯಿ ಕೊಡಬೇಕು. ಎಂದು ಕೇಳಲು ಅವರು ಬಂದಿದ್ದಾರೆ.

ಶೆಟ್ಟರು ಬಡಪೆಟ್ಟಿಗೆ ಒಪ್ಪುವವರಲ್ಲ. ಒಡವೆ ಯಾರದು ? ಅವರೇ ಏಕೆ ಬರಲಿಲ್ಲ. ? ವಾಯಿದೆ ಎಷ್ಟು. ವಾಯಿದೆ ಒಳಗೆ ಬಿಡಿಸಿಕೊಳ್ಳದೇ ಹೋದರೆ?--ಹಾಗೆಂದು ಬರೆದು ಕೊಡುತ್ತೀರಾ ? ಮೊದಲಾದ ಪ್ರಶ್ನ ಪರಂಪರೆಗಳು.

ಕೃಷ್ಣರಾಯರು ಹಾಗೂ ಹೀಗೂ ಅವರನ್ನು ಒಪ್ಪಿಸಿ, ಏನೇನೋ ಬರೆದುಕೊಟ್ಟು ಹಣವನ್ನು ತಂದರು.

* * *

ಮಂತ್ರಮೂರ್ತಿಗಳು ಹೇಳಿದ್ದಂತೆ ಹದಿನೈದನೆಯ ದಿನ ಕೊಡಗಳಲ್ಲಿರುವುದನ್ನು ಬಗ್ಗಿಸಿಕೊಳ್ಳಲಾಗಲಿಲ್ಲ. ಅದರ ಮೇಲಿನ ಗ್ರಹವು ಇನ್ನೂ ಒಂದು ಪಕ್ಷದ ಪೂಜೆಯಾಗಬೇಕು ಎಂದು ಹಿಂದಿನ ರಾತ್ರಿ ಅವರ ಕನಸಿನಲ್ಲಿ ಬಂದು ಹೇಳಿತಂತೆ.

ಇನ್ನೂ ಒಂದು ಪಕ್ಷವಾಯಿತು. ಮತ್ತೆ ಗ್ರಹವು ಬರುವ ಹುಣ್ಣಿಮೆಯುವರೆಗೂ ಪೂಜೆಯಾಗಬೇಕು, ಒಂದು ಅಮಾವಾಸ್ಯೆ, ಒಂದು ಹುಣ್ಣಿಮೆ ಪೂಜೆ ಮುಗಿಯುವವರೆಗೂ ನಾನು ದಾರಿಯನ್ನು ಕೊಡುವುದಿಲ್ಲ ಎಂದಿತಂತೆ. ಸುಮ್ಮನೆ ಗ್ರಹದ ಜೊತೆಯಲ್ಲೇಕೆ ಗುದ್ದಾಟ? ಎರಡು ದಿನ ಕಾದರೆ ಗಂಟೇನು ಹೋಗುವುದು ?

ಹುಣ್ಣಿಮೆಯು ದಿನವೂ ಕಳೆಯಿತು. ಮಂತ್ರಮೂರ್ತಿಗಳ ಹೆಸರಿಲ್ಲ.

ಕೃಷ್ಣರಾಯರ ಗೊಣಗಾಟವು ಎಲ್ಲರಿಗಿಂತಲೂ ಹೆಚ್ಚು. "೩೫೦ ರೂ. ಬೂದಿಯಲ್ಲಿ ಹೋಮ ಮಾಡಿದ ಹಾಗಾಯಿತೋ?" 'ಎಲ್ಲವೂ ಸರಿ. ಶೆಟ್ಟಿಯ ಬಳಿಯಲ್ಲಿ ೩|| ಸೇರು ಚಿನ್ನ ಹೋಗುತ್ತದಲ್ಲ!" "ಗ್ರಾಮವನ್ನು ಕೊಂಡುಕೊಳ್ಳುವುದಾಗಿ ಅವರಿಗೆ ಮುಂಗಡ ತಂದುಕೊಡುವೆನೆಂದು ಹೇಳಿದ್ದೆನಲ್ಲ?" ಎಂದು ಅವರು ಹಗಲಿರುಳೂ ಚಿಂತಿಸಿ, ಚಿಂತಿಸಿ, ಕೃಶವಾಗಿದ್ದರು ಹೆಚ್ಚು ಕಡಿಮೆ ಸೋರೆಯ ಬರುಡೆಯಂತಿದ್ದ ಹೊಟ್ಟೆಯು ಕರಗಿ, ಮಡಲಿಡುವಂತಾಯಿತು. ಹಿಂದೆ ನೋಡಿದ್ದವರು ಕಂಡರೆ ರಾಯರಿಗೇನಾದರೂ ಕ್ಷಯವೋ ಎನ್ನುವರು.

ಮಾಧವರಾಯರ ಮುಖದಲ್ಲೂ ಮೋಡ ಕವಿದಿದೆ. ಆದರೆ ಆ ಮೋಡವು ಮೋಡದಂತೆ ಕ್ಷಣಿಕ. ರಾಯರ ಪ್ರಯತ್ನದಿಂದ ದೂರವಾಗುವುದು ಆದರೂ ಅವರಿಗೆ ತಿಳಿಯದಂತೆಯೇ ಸಂದೇಹದ ಮಲಿನಚ್ಛಾಯೆ

ಯೊಮ್ಮೆ ಮೊಗದಲ್ಲಿಯೂ ತೋರಿ, ರಾಯರನ್ನು ಮೊಂಕು ಮಾಡಿ ಬಿಡುವುದು.

ಸಂತೋಷ ಸಾಗರದಲ್ಲಿ ಮುಳುಗೇಳುತ್ತಿದ್ದವರೆಂದರೆ ಕಮಲಮ್ಮನವರು. ಊರಿಗೆ ದೊಡ್ಡವರೆಂದೆನಿಸಿಕೊಂಡ ಉದಾರರಾದ ಸಾಹುಕಾರರ ಮನೆಯಲ್ಲಿ ಭೂರಿಭೋಜನವು ಬರುವ ವಾರವೆಂದು ತಿಳಿದು ತಿಂಡಿಯ ಕನಸಿನಲ್ಲಿ ನಲಿದಾಡುವ ಭಿಕ್ಷುಕನಂತೆ, ಮುಂದೆ ಬರುವ ಐಶ್ವರ್ಯದ ಅನುಭವದ ಸಂತೋಷದಲ್ಲಿ ಓಲಾಡುತ್ತ, ಹೂಗಾಳಿಯಲ್ಲಿ ತಲೆದೂಗುತ್ತ ನೋಡುವರ ಮನಸ್ಸಿಗೆ ನಲವನ್ನು ಬೀರುವ ನಳಿನಿಯಂತೆ, ಮಗನನ್ನು ಎತ್ತಿಕೊಳ್ಳುವ ಭಾಗ್ಯವು ಬೇಗನೆ ತನ್ನದಾಗುವುದೆಂದು ಬೀಗುವ ತುಂಬು ಬಸುರಿಯ ಪೂರ್ಣ ಸಂತೋಷದ ಸರಿಯಂತೆ, ಕಮಲಮ್ಮನವರು ನೋಡಿದವರಿಗೆಲ್ಲ ಸೌಖ್ಯ ಸಂತೋಷಗಳನ್ನು ಬೀರುತ್ತಿದ್ದರು. ಸಂದೇಹದ ವಿಷವು ಕಮಲಮ್ಮನವರ ಮಗುವಿನಂತಹ ಶುದ್ಧ ಮಾನಸವನ್ನು ಇನ್ನೂ ಸೋಂಕಿಯೇ ಇಲ್ಲ. ಮನೆಯ ಕ್ಷುಬ್ಧ ವಾತಾವರಣದಲ್ಲಿ, ಕಮಲಮ್ಮನವರು ಒಬ್ಬರೇ ಒಬ್ಬರು ಸುಖಿಗಳು. ಆದರೇನು ? ಅವರೊಬ್ಬರ ನಗುಮೊಗವು ಆ ಸಂದೇಹಾಂಧಕಾರದಲ್ಲಿ, ಸಂಶಯ ತಮಸ್ಸಿನಲ್ಲಿ ಬೆಳಗುವ ಸೂರ್ಯನಾಗಿತ್ತು.

* * *

ಕೃಷ್ಣರಾಯರ ಕಾತರತೆಯು ಹೆಚ್ಚಾಗುತ್ತ ಬಂದಿತು. ಕೊನೆಗೆ, ಒಂದು ರಾತ್ರಿಯೆಲ್ಲಾ ಹಾಸಿಗೆಯಮೇಲೆ ನಿದ್ದೆ

ಯಿಲ್ಲದೆ ಹೊರಳಾಡಿದ ಮೇಲೆ, ಬೆಳಗಿನ ಝಾವ ಸುಮಾರು ನಾಲ್ಕೂವರೆ ಗಂಟೆಯಲ್ಲಿ, ಕಾತರರಾದ ಜನರೂ ನಿದ್ದೆಯ ತೆಕ್ಕೆಯಲ್ಲಿ ಲೋಕವನ್ನು ಮರೆಯುವ ಸುಸಮಯದಲ್ಲಿ ಕೃಷ್ಣರಾಯರು ಎದ್ದಿದ್ದಾರೆ. ಮಹಡಿಯನ್ನು ಹತ್ತಿ ನೇರವಾಗಿ ಚಿಕ್ಕಮನೆಯ ಬಳಿಗೆ ಹೋಗಿದ್ದಾರೆ.

ಆ ಕಿರುಮನೆಗೆ ಹೋಗಬೇಕಾದರೆ, ಹಜಾರವನ್ನು ಕಳೆದುಹೋಗಬೇಕು. ಹಜಾರದಲ್ಲಿಯೇ ರಾಯರು ಸಕುಟುಂಬರಾಗಿ ಮಲಗುವುದು. ಕೃಷ್ಣರಾಯರಿಗೆ ಅದೂ ಲಕ್ಷ್ಯವಿಲ್ಲ. ಆದರೇನು ? ಆ ಹೊತ್ತಿನಲಿ ಮಹಡಿಯನ್ನು ಹತ್ತಿ ಅಭ್ಯಾಸವಿಲ್ಲದ ಕಾಲು ಮುಂದೆ ಹೋಗದು. ಆದರೆ ಕಷ್ಟಪಟ್ಟುಕೊಂಡು ಕಿರುಮನೆಯ ಬಾಗಿಲಿಗೆ ಹೋಗಿದ್ದಾರೆ.

ಬಾಗಿಲು ಬೀಗದ ಕಯ್ಯ್ಯೂ ಇವರ ಬಳಿಯಲ್ಲೇ ಇದೆ. ಇಷ್ಟು ದಿನದಿಂದಲೂ ಇದ್ದುದೂ ಇವರಲ್ಲೇ ! ಆದರೆ ಅದನ್ನು ಉಪಯೋಗಿಸುವುದಕ್ಕೆ ಮನಸ್ಸು ಮಾಡಿರುವುದು ಇಂದು. ಬೀಗದ ಕೈ ಮಣದ ಕಲ್ಲಿಗಿಂತ ಭಾರವಾಗಿ ಕೈ ನಡುಗುತ್ತಿದೆ. ಆದರೂ ಕಣ್ಮುಚ್ಚಿಕೊಂಡು ನಡುಗುವ ಕೈಯಿಂದ ತಡವರಿಸುತ್ತಾ, ಎದೆಯು ದಡದಡಿಸುತ್ತಿರಲು, ಬಾಗಿಲನ್ನು ತೆಗೆದರು.

ಕಾಲಿಗೇನಾಗಿದೆ ? ಕಿತ್ತರೂ ಕೀಳದಂತೆ ನೆಲಕ್ಕೆ ಹತ್ತಿಹೋಗಿದೆ ! ಮಂತ್ರವಾದಿಯ ಮಾಟವೋ ? ಗ್ರಹದ ಪ್ರಭಾವವೋ ? ಪರರ ಸ್ವತ್ತನ್ನು ತನ್ನ ಕೈಯಿಂದ ಮುಟ್ಟಿಸಕೂಡದೆಂಬ ತನ್ನ ಭಾಗ್ಯದ ಸಂಕಲ್ಪವೋ ? ಇಲ್ಲವಲ್ಲ ! ಶೆಟ್ಟಿಯ ವಾಯಿದೆಯು

ನಾಳಿಗೆ ಮುಗಿಯುತ್ತದೆ. ಏನಾದರೂ ಮಾಡಬೇಕು ಇಲ್ಲವಾದರೆ ತನ್ನೊಡೆಯನ ೨|| ಸೇರು ಚಿನ್ನವನ್ನು ತಾನಾಗಿ ಕಳೆದಂತಾಗುತ್ತದೆ. ಯತ್ನವಿಲ್ಲ. ಸ್ವಸಂಕಲ್ಪವು ಮಾಡಿಸಲಾರದೆ ಹೋದ ಕೆಲಸವನ್ನು ಪ್ರಭುಭಕ್ತಿಯು, ವಿಶ್ವಾಸವು, ನಷ್ಟದ ಭೀತಿಯು ಮಾಡಿಸಿತು. ರಾಯರು ಹೋಗಿ ಕೊಡಗಳ ಮುಂದೆ ಕುಳಿತರು. ಉತ್ತರಕ್ಷಣದಲ್ಲಿಯೇ "ರಾಮಾ" ಎಂಬುದೊಂದು ಆರ್ತನಿನಾದವು ಮನೆಯಲ್ಲೆಲ್ಲಾ ಮೊಳಗಿತು. ಆಗತಾನೇ ಜೊಂಪು ಹತ್ತಿದ್ದ ರಾಯರು ಬೆಚ್ಚಿಬಿದ್ದು ಎದ್ದರು. ಸವಿಗನಸಿನಲ್ಲಿ ಮೃದುವಾಗಿ ನಗುತ್ತಿದ್ದ ಕಮಲಮ್ಮನವರು, ಎತ್ತಿ ಹಾಕಿದಂತಾಗಲು ತಟ್ಟನೆದ್ದರು.

ಇಬ್ಬರೂ ನೇರವಾಗಿ ದಡಗುಟ್ಟಿಕೊಂಡು ಕಿರುಮನೆಗೆ ಹೋದರು. ಅಲ್ಲಿ ರಾಯರು ನೀರವವಾಗಿ ನಿಸ್ಪಂದವಾಗಿ, ವೈಯರಿವಿಲ್ಲದೆ ಬಿದ್ದಿದ್ದಾರೆ. ಒಂದು ಕೊಡವು ನೆಲದ ಕಡೆಗೆ ಬಿದ್ದಿದೆ. ಅದರ ಬಾಯಿಂದ ಇನ್ನೂ ಮಣ್ಣು ಸುರಿಯುತ್ತಿದೆ.

ಕಮಲಮ್ಮನವರು ನಂದಾದೀಪವನ್ನೆತ್ತಿ, ಕೊಡದ ಕಡೆಗೆ ಹೋದರು. ಒಳಗೆ ಕೈಯಿಟ್ಟು ನೋಡುವುದಕ್ಕೆ ಪ್ರತಿಯಾಗಿ ಅಲ್ಲಿದ್ದ ಗಂಧದ ಕೊರಡಿನಿಂದಲೇ ಎರಡು ಕೊಡಗಳಿಗೂ ಎರಡೇಟು ಕೊಟ್ಟರು. ಕೊಡವೊಡೆದು ಬಿತ್ತು; ಕಲ್ಲು ಮಣ್ಣು ಈಚೆಗೆ ಸುರಿಯಿತು. ಕಮಲಮ್ಮನವರು ಕಿಟಾರನೆ ಕಿರಿಚಿಕೊಂಡು ಕೆಳಗೆ ಬಿದ್ದರು.

* * *

ಕೃಷ್ಣರಾಯರೂ ಕಮಲಮ್ಮನವರೂ ಪುನಃ ಸಚೇತನರಾಗಲಿಲ್ಲ. ಕೃಷ್ಣರಾಯರಿಗೆ ಆ ದಿನ ಸುಮಾರು ಒಂಭತ್ತು ಗಂಟೆಗೆ ಜ್ಞಾನ ಬಂತು. ರಾಯರನ್ನು ಕರೆದು ಶೆಟ್ಟಿಯದನ್ನು ಹೇಳಿಬಿಟ್ಟರು. ರಾಯರು ಕಮಲಮ್ಮನವರ ಸ್ಥಿತಿಯನ್ನು ಹೇಳಿದರು. ಕೃಷ್ಣರಾಯರು ವಿಕಟವಾಗಿ, ಭಯಂಕರವಾಗಿ, "ಅಯ್ಯೋ! ಪಾಪಿ! ತಿಂದ ಮನೆಯನ್ನು ತೊಡೆದೆಯಾ?" ಎಂದು ಕಿರಿಚಿಕೊಂಡು, "ಎಲ್ಲಿ! ನನ್ನ ತಾಯಿಯೆಲ್ಲಿ! ಈ ಮನೆಯ ಭಾಗ್ಯಲಕ್ಷ್ಮಿಯೆಲ್ಲಿ! ನನ್ನ ಕಾಮಧೇನುವೆಲ್ಲಿ?" ಎಂದು ಕೂಗಿಕೊಳ್ಳುತ್ತ ಮೇಲಕ್ಕೆದ್ದರು.

ಕಾಲು ಮೈಯ್ಯ ಭಾರವನ್ನು ತಡೆಯಲಾರದೆ ನಡುಗಿತು. ಸಂಕಲ್ಪದ ಬಲವು ಎರಡಡಿಯಿಡಿಸಿತು. ಆದರೇನು? ದೂರ ಹೋಗಲಿಲ್ಲ. ಅಡಿಗಡಿದ ಬಾಳೆಯಂತೆ ಧೊಪ್ಪನೆ ಬಿದ್ದುಹೋದರು. ತಲೆಯು ಬಾಗಿಲ ಹೊಸಲಿಗೆ ಬಿದ್ದು ಚಿಪ್ಪು ಒಡೆದುಹೋಯಿತು. ಕೃಷ್ಣರಾಯರು ಕಮಲಮ್ಮನವರ ದರ್ಶನ ತೆಗೆದುಕೊಂಡರು: ಆದರೆ ಸ್ಥೂಲಚಕ್ಷುಸ್ಸಿನಿಂದಲ್ಲ.

* * *

ಕಮಲಮ್ಮನವರಿಗೆ ಪ್ರಜ್ಞೆ ಬರುತ್ತದೆ. ತಪ್ಪುತ್ತದೆ. ಮಕ್ಕಳೆಲ್ಲರೂ ಬಂದಿದ್ದಾರೆ. ಪ್ರಜ್ಞೆ ಬಂದಾಗ, ಸೊಸೆಯರಿಗೆ ಒಡವೆಯಿಕ್ಕಿ ನೋಡಿ ದಣಿಯುವ ನಲಿವು. ಮತ್ತೊಮ್ಮೆ ಭಯಂಕರ ಚೀತ್ಕಾರ, ಕೊನೆಗೆ ಶಾಂತಿ.

ಇಂದು ಕೃಷ್ಣರಾಯರ ವೈಕುಂಠ ಸಮಾರಾಧನೆ. ಮಾಧವರಾಯರು ಸ್ವಂತವಾಗಿ ತಾವೇ ಅವರಿಗೆ ಅಪರ ಕರ್ಮ ಮಾಡಬೇಕೆಂದು ಯತ್ನಿಸಿದರು. ಮನೆಯ ತಾಪತ್ರಯದಿಂದ ಸಾಧ್ಯವಾಗಲಿಲ್ಲ; ಕೊನೆಗೆ ಯೋಗ್ಯನಾದವನೊಬ್ಬನಿಂದ ಮಾಡಿಸಿದರು

ಇಂದು ಕಮಲಮ್ಮನವರ ಸ್ಥೂಲದೇಹವು ಬಿದ್ದು ಹೋಗುವ ಸೂಚನೆಗಳು ಬಹಳವಾಗಿವೆ. ಧ್ವನಿಯು ಕುಗ್ಗಿದೆ. ಗಂಟಲಿನಲ್ಲಿ ಶ್ಲೇಷ್ಮವು ಹೆಚ್ಚಿ ಹೋಗಿ, ಬರುವ ಉಸಿರಿಗೆ ಅಡಚಣೆಯು ಹೆಚ್ಚುತ್ತಿದೆ. ಕಣ್ಣಿನ ಕಾಂತಿಯು ಮಸುಳಿಸುತ್ತಿದೆ. ಬಂದ ಪ್ರಜ್ಞೆಯು ಬಹಳ ಹೊತ್ತು ನಿಲ್ಲುವುದಿಲ್ಲ.

ಮಗ್ಗುಲಲ್ಲಿ ಮಕ್ಕಳೆಲ್ಲರೂ ರೋದಿಸುತ್ತಿದ್ದಾರೆ. ತಲೆಯ ಕಡೆಯಲ್ಲಿ ರಾಯರು ನೀರವವಾಗಿ ಶೋಕಿಸುತ್ತಿದ್ದಾರೆ. ಕಣ್ಣಿನಿಂದ ನೀರು ಧಾರಾಳವಾಗಿ ಸುರಿಯುತ್ತಿದೆ. ಯಾರೂ ಗಟ್ಟಿಯಾಗಿ ಉಸಿರನ್ನೂ ಬಿಡರು. "ಇದ್ದಷ್ಟು ಹೊತ್ತಿನಲ್ಲಿ ಅಕೆಗೇಕೆ ನಮ್ಮಿಂದ ತೊಂದರೆಯಾಗಬೇಕು ?" ಎಂಬುದು ನುಡಿಯದಿದ್ದರೂ ನಡೆಯಿಂದ ತೋರುತ್ತಿರುವುದು.

ಕೊನೆಗೊಮ್ಮೆ ಪ್ರಜ್ಞೆಯು ಬಂತು. ಕಮಲಮ್ಮನವರು ಕಣ್ಣನ್ನು ದೊಡ್ಡದಾಗಿ ಬಿಟ್ಟರು. ಯಾರನ್ನೋ ಹುಡುಕುತ್ತಿರಬಹುದು. ಯಾರನ್ನು ಹುಡುಕುತ್ತಿರುವರೋ ಅವರು ಮಾತ್ರ ಮುಖವನ್ನು ತೋರಿಸಲು ಹಿಂದೆಗೆದರು. ಕಮಲಮ್ಮನವರು ನಿರಾಶ

ರಾಗಿ ತೊದಲುವ ನಾಲಗೆಯಿಂದ, ಬಹು ಕಷ್ಟದಿಂದ, "ಅ—ವ—ರು" ಎಂದರು.

ಅವರು ಗೊಳೋ ಎಂದು ಅಳುತ್ತಾ, "ಕಮಲಾ! ಕಮಲಾ! ನನ್ನನ್ನು ಬಿಟ್ಟುಹೋಗುತ್ತೀಯಾ? ಕಮಲಾ! ನನ್ನ ಕಮಲಾ!" ಎಂದು ಆಕೆಯ ಮುಖವನ್ನು ತಮ್ಮ ಮುಖದಿಂದ ಮುಚ್ಚಿಬಿಟ್ಟರು.

ಕಮಲಮ್ಮನವರ ಪ್ರಾಣವಾಯುವು ತನ್ನ ಸ್ವಾಮಿಯ ಮುಖದೊಡನೆ ತನ್ನ ಮುಖವನ್ನು ಸೇರಿಸಿಕೊಂಡಿರುವ ದೇಹವನ್ನು ಬಿಟ್ಟು ತೆರಳಿತು. ಸ್ವಾಮಿಯ ಕಂಠವನ್ನು ಆಲಿಂಗಿಸಲು ಎತ್ತಿದ ಕೈಯು ಧೊಪ್ಪನೆ ಕೆಳಕ್ಕೆ ಬಿದ್ದುಹೋಯಿತು.

---

ಮಕ್ಕಳಿಗಾಗಿಯೇ ಹೊರಡುವ ಮಾಸಪತ್ರಿಕೆ

# ಮಕ್ಕಳ ಪುಸ್ತಕ



ವಾರ್ಷಿಕ ಚಂದಾ 3—0—0

ಮ್ಯಾನೇಜರ್

"ಮಕ್ಕಳ ಪುಸ್ತಕ"

ಬಳೇಪೇಟೆ, ಬೆಂಗಳೂರು ಸಿಟಿ.